ಮೈಸೂರು ವಿಶ್ವವಿದ್ಯಾನಿಲಯ
ಪ್ರಚಾರ ಪುಸ್ತಕಮಾಲೆ—೭೬

# ಮಹಾಭಾರತ

ಲೇಖಕರು:
ಡಾ|| ಕೆ. ಕೃಷ್ಣಮೂರ್ತಿ, ಎಂ.ಎ., ಬಿ.ಟಿ., ಪಿ.ಎಚ್‌ಡಿ.,



ಮೈಸೂರು
ಮೈಸೂರು ವಿಶ್ವವಿದ್ಯಾನಿಲಯ
೧೯೫೮

# ಮೈಸೂರು ವಿಶ್ವವಿದ್ಯಾನಿಲಯ
# ಪ್ರಚಾರ ಪುಸ್ತಕಮಾಲೆ

೧. ಖಗೋಳಶಾಸ್ತ್ರ ಪ್ರವೇಶ
—ಡಾ॥ ಸಿ. ಎನ್. ಶ್ರೀನಿವಾಸ ಅಯ್ಯಂಗಾರ್
೨. ಸಮಾಜದ ರೋಗರುಜಿನಗಳು—ಜಿ. ಹನುಮಂತರಾವ್
೩. ತೆರಿಗೆ—ಬಿ. ಆರ್. ಸುಬ್ಬರಾವ್
೪. ನವರತ್ನಗಳು—ಎಚ್. ಸುಬ್ಬಾಜೋಯಿಸ್
೫. ನಮ್ಮ ಹಳ್ಳಿಗಳು—ಜಿ. ಎನ್. ಕೃಷ್ಣಮೂರ್ತಿ
೬. ಕುಮಾರವ್ಯಾಸ—ಎಸ್. ವಿ. ರಂಗಣ್ಣ
೭. ಹಂಪೆಯ ಹರಿಹರ—ಡಿ. ಎಲ್. ನರಸಿಂಹಾಚಾರ್
೮. ಕನ್ನಡ ಸಾಹಿತ್ಯ—ಕೆ. ವೆಂಕಟರಾಮಪ್ಪ
೯. ವಿದ್ಯುಚ್ಛಕ್ತಿಯ ವೈಭವ—ಬಿ. ಎ. ಕೃಷ್ಣಸ್ವಾಮಿರಾವ್
೧೦. ಪಂಪ—ತೀ. ನಂ. ಶ್ರೀಕಂಠಯ್ಯ
೧೧. ಪ್ರಾಣಿಜೀವನ—ಎ. ನಾರಾಯಣರಾವ್
೧೨. ಕನಸುಗಳು—ಡಾ॥ ಎನ್. ಎಸ್. ನಾರಾಯಣಶಾಸ್ತ್ರೀ
೧೩. ಮದುವೆ— ನಾ. ಕಸ್ತೂರಿ
೧೪. * ನಮ್ಮ ಆರ್ಥಿಕದೃಷ್ಟಿ—ಎಸ್. ಗೋಪಾಲಸ್ವಾಮಿ
೧೫. ವಾಯುಗುಣ—ಕೆ. ಶೇಷಾದ್ರಿ ಅಯ್ಯಂಗಾರ್
೧೬. ಬೆಳಕು—ಟಿ. ಎಸ್. ಸುಬ್ಬರಾಯ
೧೭. ಕರ್ನಾಟಕ ಕಾದಂಬರಿ—ವಿ. ಸೀತಾರಾಮಯ್ಯ
೧೮. ಕಾಳಿದಾಸನ ಕಾವ್ಯಗಳು—ಎಸ್. ರಾಮಚಂದ್ರರಾವ್
೧೯. ಇಂಗ್ಲೆಂಡಿನ ರಾಜಕೀಯ ಬೆಳವಣಿಗೆ—ಪಿ. ಜಿ. ಸತ್ಯಗಿರಿನಾಥನ್
೨೦. ಕಣ್ಣು ಮತ್ತು ಅದರ ರಕ್ಷಣೆ—ಡಿ. ಶಾಮಣ್ಣ
೨೧. ಸಾರ್ವಜನಿಕ ವೆಚ್ಚ—ಡಾ॥ ಎಂ. ಎಚ್. ಗೋಪಾಲ್
೨೨. ಶಿಶುವಿಹಾರಗಳು—ಸಿ. ರಂಗಾಚಾರ್
೨೩. ಸಂಖ್ಯೋದ್ಯಾನ—ಬಿ. ಸೀತಾರಾಮಶಾಸ್ತ್ರಿ
೨೪. ವಿಡಂಬನ—ಎಸ್. ವಿ. ರಂಗಣ್ಣ
೨೫. ಎಲ್ಲೋರ ಮತ್ತು ಅಜಂತ—ಡಾ॥ ಎಂ. ಎಚ್. ಕೃಷ್ಣ

ಮೈಸೂರು ವಿಶ್ವವಿದ್ಯಾನಿಲಯ
ಪ್ರಚಾರ ಪುಸ್ತಕಮಾಲೆ—೭೬

# ಮಹಾಭಾರತ

ಲೇಖಕರು:

ಡಾ॥ ಕೆ. ಕೃಷ್ಣಮೂರ್ತಿ, ಎಂ.ಎ., ಬಿ.ಟಿ., ಪಿ.ಎಚ್‌ಡಿ.,




AKSHARA GRANTHALAYA
ACC.NO. 111436

ಮೈಸೂರು
ಮೈಸೂರು ವಿಶ್ವವಿದ್ಯಾನಿಲಯ
೧೯೫೮

ಮೊದಲನೆಯ ಮುದ್ರಣ ೧೯೫೮

೩೦೦೦ ಪ್ರತಿಗಳು

894.5923
KRD

(R) 111436

ಬೆಲೆ

ಸಾದಾ ಪ್ರತಿ ೨೫ ನಯೆ ಪೈಸೆ

ಉತ್ತಮ ಪ್ರತಿ ೩೭ ನಯೆ ಪೈಸೆ

ಮುದ್ರಕರು :

ಮೈಸೂರು ಯೂನಿವರ್ಸಿಟಿ ಮುದ್ರಣಾಲಯ,

ವಿ. ವಿ. ಮೊಹಲ್ಲ, ಮೈಸೂರು

# ಮುನ್ನುಡಿ

ಈ ಪ್ರಚಾರ ಪುಸ್ತಕಮಾಲೆ ಪ್ರಾರಂಭವಾಗಿ ಇಂದಿಗೆ ಸುಮಾರು ಇಪ್ಪತ್ತು ವರ್ಷಗಳಾಗಿವೆ. ಈ ಅವಧಿಯಲ್ಲಿ ೭೫ ಪುಸ್ತಿಕೆಗಳು ಈ ಮಾಲೆಯಲ್ಲಿ ಪ್ರಕಟವಾಗಿವೆ. ಕಾಲಾವಧಿಯನ್ನು ಗಮನಿಸಿದರೆ ಈಗ ಹೊರಬಿದ್ದಿರುವ ಕಿರು ಹೊತ್ತಿಗೆಗಳ ಸಂಖ್ಯೆ ಈಗಿರುವುದಕ್ಕಿಂತಲೂ ದ್ವಿಗುಣವೊ ತ್ರಿಗುಣವೊ ಆಗಿರಬೇಕಾಗಿತ್ತೆಂದು ಹೇಳಬಹುದು. ಆದರೂ ಅವುಗಳ ಗುಣವನ್ನು ಅವು ಮಾರಾಟವಾಗುತ್ತಿರುವ ವೇಗವನ್ನು ಗಮನಿಸಿದರೆ ಈ ಮಾಲೆಯ ಉಪಯುಕ್ತತೆ ಮತ್ತು ಜನಪ್ರಿಯತೆ ವ್ಯಕ್ತವಾಗುತ್ತದೆ. ಸಾಮಾನ್ಯವಾಗಿ ಪ್ರತಿಯೊಂದು ಪುಸ್ತಿಕೆಯೂ ಮೂರು ನಾಲ್ಕು ಸಾರಿ ಮುದ್ರಿತವಾಗಿದೆ. ದಿನೇದಿನೇ ಈ ಮಾಲೆಯ ಬಗೆಗೆ ಜನರ ವಿಶ್ವಾಸಾದರಗಳು ಅಧಿಕವಾಗುತ್ತಿವೆ. "ಈ ತಿಂಗಳು ಏನಾದರೂ ಹೊಸ ಪುಸ್ತಿಕೆ ಬಂದಿದೆಯೆ ? ಮುಗಿದು ಹೋಗಿರುವ ಪುಸ್ತಿಕೆಗಳು ಅಚ್ಚಾಗಿವೆಯೆ?" ಎಂದು ಮೇಲಿಂದ ಮೇಲೆ ಜನ ಕೇಳುತ್ತಿರುತ್ತಾರೆ. ಇದು ನಿಜವಾಗಿಯೂ ಸಂತೋಷದ ಸಂಗತಿ; ನಾಡಿನ ಪ್ರಗತಿಯ ಒಂದು ಚಿಹ್ನೆ.

ನಾಡಿನಲ್ಲಿ ದಿನೇ ದಿನೇ ವಿದ್ಯಾವಂತರ ಮತ್ತು ಅಕ್ಷರಸ್ಥರ ಸಂಖ್ಯೆ ಬೆಳೆಯುತ್ತಿದೆ. ಕೇವಲ ಸಾಕ್ಷರತೆಯಿಂದ ಮಹತ್ತಾದ ಪ್ರಯೋಜನವೇನೂ ಲಭಿಸದು. ಸಾಕ್ಷರತೆ ಬೇರೊಂದು ಸಿದ್ಧಿಗಾಗಿ ಸಾಧನವೇ ಹೊರತು ಅದೇ ಪರಮ ಗುರಿಯಲ್ಲ; ಜ್ಞಾನ ಸಂಪಾದನೆಯೇ ಅದರ ಪರಮ ಗುರಿ. ಈ ಗುರಿಯ ಸಾಧನೆಗಾಗಿ ಸಕಲ ಅನುಕೂಲತೆಗಳನ್ನು ಕಲ್ಪಿಸುವುದು ವಿಶ್ವವಿದ್ಯಾನಿಲಯದಂಥ ಸಂಸ್ಥೆಗಳ ಆದ್ಯಕರ್ತವ್ಯ. ಈ ಮೂಲಕ ವಿಶ್ವ

ವಿದ್ಯಾನಿಲಯದ ಜ್ಞಾನವಾಹಿನಿ ನಾಡಿನ ಮೂಲೆಮೂಲೆಗೆಲ್ಲ ಹರಿದು, ಸಮಷ್ಟಿಪ್ರಜ್ಞೆ ವಿಕಾಸಗೊಳ್ಳಲನುಕೂಲವಾಗುತ್ತದೆ.

ಈ ಮಾಲೆಯಿಂದ ಸಾಮಾನ್ಯ ಜನರಲ್ಲಿ ಜ್ಞಾನ ಪ್ರಸಾರ ಕಾರ್ಯ ತಕ್ಕಮಟ್ಟಿಗೆ ಯಶಸ್ವಿಯಾಗಿ ನಡೆದಿರುವಂತೆಯೆ ಕನ್ನಡ ದಲ್ಲಿ ವಿಜ್ಞಾನ ಸಂಬಂಧವಾದ ವಿಷಯಗಳನ್ನು ಸುಲಭವಾಗಿ ಸರಳವಾಗಿ ಹೇಳಬಹುದು, ಮತ್ತು ಕನ್ನಡ ವೈಜ್ಞಾನಿಕ ಭಾಷೆ ಯಾಗಬಲ್ಲದು ಎಂಬ ಅಂಶ ಸ್ಪಷ್ಟವಾಗಿ ವ್ಯಕ್ತವಾಗುತ್ತದೆ. ಈ ಪುಸ್ತಿಕೆಗಳ ಪಟ್ಟಿಯನ್ನೊಮ್ಮೆ ಓದಿದರೆ ಸಂದೇಹ ವಾದಿಗಳ ಶಂಕೆ ಸಂಪೂರ್ಣವಾಗಿ ನಿವಾರಣೆಗೊಂಡು ಧೈರ್ಯ ಮೂಡದಿರದು. ಇವುಗಳಲ್ಲಿ ೪೪ ಪುಸ್ತಿಕೆಗಳು ಭೌತವಿಜ್ಞಾನ, ರಸಾಯನ ವಿಜ್ಞಾನ, ಪ್ರಾಣಿವಿಜ್ಞಾನ, ಸಮಾಜ ವಿಜ್ಞಾನ, ವೈದ್ಯ ವಿಜ್ಞಾನ, ಗಣಿತ ವಿಜ್ಞಾನ, ಇತಿಹಾಸ ಮೊದಲಾದವುಗಳಿಗೆ ಸಂಬಂಧಿಸಿದವು. ಉಳಿದ ೨೩ ಪುಸ್ತಿಕೆಗಳು ಸಾಹಿತ್ಯ ಮತ್ತು ಸಾಹಿತ್ಯ ವಿಮರ್ಶೆಗೆ ಸಂಬಂಧಿಸಿದುವು. ಇವುಗಳ ಗ್ರಂಥಕರ್ತರು ಪ್ರಮುಖವಾಗಿ ವಿಶ್ವವಿದ್ಯಾನಿಲಯದಲ್ಲಿ ಹತ್ತಿಪ್ಪತ್ತು ವರ್ಷಗಳ ಕಾಲ ಪಾಠ ಹೇಳಿ ನುರಿತಿರುವ ಘನವಿದ್ವಾಂಸರು. ಬಹಳ ಹಿಂದೆಯೇ ವೈಜ್ಞಾನಿಕ ಗ್ರಂಥಗಳ ರಚನೆಗೆ ಕೈಹಾಕಿ ಕನ್ನಡ ವೈಜ್ಞಾನಿಕ ಭಾಷೆಯಾಗುವ ಸಾಮರ್ಥ್ಯವನ್ನು ಪಡೆದಿದೆ. ವಿಶ್ವವಿದ್ಯಾನಿಲಯದಲ್ಲಿ ಶಿಕ್ಷಣ ಮಾಧ್ಯಮವಾಗುವ ಶಕ್ತಿ ಯನ್ನು ಪಡೆದಿದೆ ಎಂದು ತೋರಿಸಿಕೊಟ್ಟಿದ್ದಾರೆ. ಅವರೆಲ್ಲ ಅಭಿನಂದನಾರ್ಹರು.

ಈ ಮಾಲೆಯ ಕಾರ್ಯ ತ್ವರಿತಗೊಂಡು, ವಿಸ್ತಾರಗೊಂಡು ಪುಸ್ತಕಗಳ ಸಂಖ್ಯೆ ದಿನೇದಿನೇ ಬೆಳೆಯುಬೇಕೆಂದೂ, ಇದರಿಂದ ಸಾಮಾನ್ಯ ಜನತೆ ಸಂಪೂರ್ಣ ಪ್ರಯೋಜನ ಪಡೆದು ಸಮಷ್ಟಿ

ಪ್ರಜ್ಞೆ ಸರ್ವತೋಮುಖವಾಗಿ ವಿಕಾಸಗೊಳ್ಳಬೇಕೆಂಬುದೂ ವಿಶ್ವವಿದ್ಯಾನಿಲಯದ ಆಸೆ. ಕನ್ನಡನಾಡು ಒಂದುಗೂಡಿರುವ ಈ ಶಕ ಮುಹೂರ್ತದಲ್ಲಿ ಕನ್ನಡನುಡಿ ಆಡಳಿತ ಭಾಷೆಯಾಗಿ, ವ್ಯವಹಾರದ ಭಾಷೆಯಾಗಿ, ಶಿಕ್ಷಣದ ಭಾಷೆಯಾಗಿ, ಜನತೆಯ ಸಂಸ್ಕೃತಿವಿಕಾಸಸಾಧನದ ಭಾಷೆಯಾಗಿ ಮುಂದುವರಿಯು ವುದರಲ್ಲಿ ಸಂದೇಹವಿಲ್ಲ. ವಿಶ್ವವಿದ್ಯಾನಿಲಯದ ಈ ಭಾಷೆ ಯನ್ನು ಕರ್ನಾಟಕ ಸಂಪೂರ್ಣವಾಗಿ ತನ್ನ ಮೇಲ್ಮೆಗೂ ಏಳ್ಗೆಗೂ ಬಳಸಿಕೊಳ್ಳುತ್ತದೆಂದು ನಾವು ಹಾರೈಸುತ್ತೇವೆ.

ಮೈಸೂರು<br>
೨೪—೪—೫೮

ಕೆ. ವಿ. ಪುಟ್ಟಪ್ಪ<br>
ವೈಸ್-ಛಾನ್ಸಲರ್.

# ವಿಷಯಾನುಕ್ರಮಣಿಕೆ

# ಮಹಾಭಾರತ

---

“ ನಾರಾಯಣಂ ನಮಸ್ಕೃತ್ಯ ನರಂ ಚೈವ ನರೋತ್ತಮಂ |
ದೇವೀಂ ಸರಸ್ವತೀಂ ವ್ಯಾಸಂ ತತೋ ಜಯಮುದೀರಯೇತ್ ‖ ”

“ ನಮಿಸಿ ನಾರಾಯಣನ ನರನ ಪುರುಷೋತ್ತಮನ |
ವ್ಯಾಸ ವಾಗ್ದೇವಿಯರ ಬಳಿಕ ಪೇಳ್ವುದು ಜಯವ ‖ ”

(ಎ. ಆರ್. ಕೃಷ್ಣಶಾಸ್ತ್ರೀ)

## ೧. ಪೀಠಿಕೆ

ಮಹಾಭಾರತ, ರಾಮಾಯಣ, ಎರಡೂ ಭಾರತೀಯರಿಗೆಲ್ಲ ಪೂಜ್ಯತಮವಾದ ಗ್ರಂಥಗಳು. ಎರಡೂ ಭಾರತೀಯ ಸಾಹಿತ್ಯಧಾರೆಯ ಉದ್ಗಮ ಸ್ಥಾನಗಳು. ಎರಡೂ ದೊಡ್ಡವು; ಪರಿಮಾಣದಲ್ಲಷ್ಟೇ ಅಲ್ಲ, ತೂಕದಲ್ಲಿಯೂ ದೊಡ್ಡವು. ಭಾರತದ ಮಹರ್ಷಿಗಳ ಬ್ರಹ್ಮತೇಜಸ್ಸು, ರಾಜರ್ಷಿಗಳ ಧರ್ಮನಿಷ್ಠೆ, ಧೀರನಾಯಕರ ಕ್ಷಾತ್ರಸಾಹಸಗಳು, ಮೂರೂ ಮಡುಗಟ್ಟಿ ಆರ್ಯರ ಆದರ್ಶಸಂಸ್ಕೃತಿ ಈ ಗ್ರಂಥಗಳಲ್ಲಿ ಅಜರಾಮರವಾಗಿದೆ. ಕಲಿಯುಗದ ಗಾಳಿಯಿನ್ನೂ ಬೀಸದ, ಧರ್ಮಜ್ಯೋತಿ ಮಾಸದ, ಸ್ವರ್ಣಯುಗಗಳ ಸುಂದರಪ್ರಕಾಶವನ್ನು ಎರಡರಲ್ಲಿಯೂ ನೋಡಬಹುದು. ಇಂದ್ರಾದಿ ದೇವತೆಗಳೊಡನೆ ಸೆಣಸಿ ಸಖ್ಯವನ್ನು ಪಡೆಯುವ ಧೀರರು ಈ ಆರ್ಷಕೃತಿಗಳ ನಾಯಕರು. ತಪೋವನದ ಸಂಸ್ಕೃತಿಯೂ ರಣಾಂಗಣದ ಪರಾಕ್ರಮ ಚಮತ್ಕೃತಿಯೂ, ಕೌಟುಂಬಿಕ ಜೀವನ ಧ್ಯೇಯಗಳ ಆವಿಷ್ಕೃತಿಯೂ ಎರಡರಲ್ಲಿಯೂ ಕೂಡಿಕೊಂಡೇ ಬರುತ್ತವೆ.

ಆದರೆ ಇವುಗಳ ಸಾಮ್ಯ ಇಲ್ಲಿಗೆ ಮುಗಿಯುತ್ತದೆ. ರಾಮಾಯಣವು ಆದಿಕಾವ್ಯವಾದರೆ ಮಹಾಭಾರತ ಕೇವಲ ಕಾವ್ಯವಲ್ಲ, ಜ್ಞಾನದೀಪ. ರಾಮಾಯಣದ ಕಥೆ ಒಬ್ಬ ನಾಯಕನಿಗೆ, ಒಬ್ಬ ಪ್ರತಿನಾಯಕನಿಗೆ ಸಂಬಂಧಿಸಿದುದು; ನೂರಾರು ಉಪಕಥೆಗಳು ಬಂದರೂ ಮುಖ್ಯಕಥೆಯ ಸೂತ್ರ ಎಲ್ಲಿಯೂ ಕಣ್ಮರೆಯಾಗುವುದಿಲ್ಲ. ವಾಲ್ಮೀಕಿ ಮಹಾಕವಿಯಾದುದರಿಂದ ಕಾವ್ಯ ಎಲ್ಲಿಯೂ ನೀರಸವಾಗುವುದಿಲ್ಲ. ಆದರೆ ಮಹಾಭಾರತದಲ್ಲಿ ಬರುವ ಮುಖ್ಯ ಪಾತ್ರಗಳೇ ಹತ್ತಾರು ಜನ. ಎಲ್ಲರೂ ನಾಯಕರೆನಿಸುವ ಅರ್ಹತೆಯನ್ನುಳ್ಳವರೇ. ಎಲ್ಲರ ಕಥೆಯೂ ವ್ಯಾಸನಿಗೆ ಮುಖ್ಯವೇ. ಆದುದರಿಂದ ವ್ಯಾಸನ ಕಥಾನಾಯಕ ಇಂತಹವನೇ ಎನ್ನುವುದು ಕೂಡ ಕಷ್ಟವಾಗುತ್ತದೆ. ಯುದ್ಧದ ಕಥೆಯೇ ಭಾರತದ ಮುಖ್ಯ ಕಥೆಯೆನ್ನುವುದಾದರೆ ರಾಜ್ಯಾಭಿಷೇಕವಾಗುವ ಯುಧಿಷ್ಠಿರನೇ ನಾಯಕನೆಂದು ತಿಳಿಯುವ ವಾಡಿಕೆಯಿದೆ. ಆದರೆ ಕನ್ನಡದ ಆದಿಕವಿ ಪಂಪನಿಗೆ ಯುದ್ಧದಲ್ಲಿ ಅದ್ವಿತೀಯ ಪಾತ್ರವನ್ನು ವಹಿಸಿದ ಅರ್ಜುನನೇ ನಾಯಕನೆಂದು ಭಾಸವಾಯಿತು. ಮಲ್ಲಯುದ್ಧ ರಸಿಕನಾದ ಕವಿಚಕ್ರವರ್ತಿ ರನ್ನನಿಗೆ ಭೀಮನ ಭೀಕರಪ್ರತಿಜ್ಞೆಯೂ, ಅವನ್ನವನು ನಿರ್ವಹಿಸಿದ ಅಸಮ ಸಾಹಸವೂ ಮೆಚ್ಚಾದುವು; ಸಾಹಸಭೀಮನೇ ನಾಯಕಪದವಿಗೆ ಯೋಗ್ಯನೆನ್ನಿಸಿರಬಹುದು. ಇಬ್ಬರೂ ಕರ್ಣನ ಪಾತ್ರಕ್ಕೆ ಮಾರುಹೋಗಿ, ಅವನ ಉಜ್ವಲ ತೇಜಕ್ಕೆ ಪರವಶರಾಗಿ, ಅವನ ದುರಂತಕ್ಕೆ ಕಣ್ಣೀರಿಟ್ಟಿರುವವರೇ. ಕುಮಾರವ್ಯಾಸನಿಗಂತೂ ಭಾರತವೆಲ್ಲ ಕೃಷ್ಣನ ಗೊಂಬೆಯಾಟವೇ. ಬೇರೆಯವರೆಲ್ಲರೂ ನಿಮಿತ್ತಮಾತ್ರರು. ಹೀಗೆ ಪ್ರಾಚೀನ

ಕಾಲದ ಮಹಾಮತಿಗಳೇ ಮಹಾಭಾರತದ ಬೆಳಕನ್ನು ಬೇರೆ ಬೇರೆ ರೀತಿಯಾಗಿ ಕಂಡಿದ್ದಾರೆ. ಭೀಷ್ಮ, ದ್ರೋಣ, ಅಶ್ವತ್ಥಾಮ, ದ್ರೌಪದಿ—ಎಲ್ಲರ ಚರಿತ್ರೆಯೂ ಒಂದಲ್ಲ, ಹತ್ತಾರು ಸ್ವತಂತ್ರ ಸಾಹಿತ್ಯ ಕೃತಿಗಳಿಗೆ ಪ್ರೇರಕವಾಗಿದೆ. ಇಷ್ಟೇ ಅಲ್ಲ; ನಮಗೆ ಸ್ವತಂತ್ರ ಕೃತಿಗಳೆನಿಸುವಂತೆ ಪರಿಚಿತವಾಗಿರುವ ನಳ ಚರಿತ್ರೆ, ಸಾವಿತ್ರೀ ಚರಿತ್ರೆ, ಶಕುಂತಲೆಯ ಕಥೆ ಮುಂತಾದ ನೂರಾರು ಕಥಾನಕಗಳೆಲ್ಲವೂ ಮಹಾಭಾರತದ ಮಹಾಗರ್ಭದಲ್ಲಿ ಪ್ರಾಸಂಗಿಕವಾಗಿ ಬರುವ ಉಪಾಖ್ಯಾನಗಳು. ಪಂಚತಂತ್ರದಲ್ಲಿ ಬರುವಂತಹ ಪಶುಪಕ್ಷಿಗಳ ನೀತಿ ಕಥೆಗಳೂ, ನಿಗ್ರಹಾನುಗ್ರಹ ಸಮರ್ಥರಾದ ಮುನಿತಪಸ್ವಿಗಳ ಕಥೆಗಳೂ, ವೈರಾಗ್ಯಪರವಾದ ಕಥೆಗಳೂ ಸಾವಿರಗಟ್ಟಲೆ ನೆಯ್ದುಕೊಂಡಿರುವ ಮಹಾಭಾರತದಲ್ಲಿ ಪಾಂಡವ-ಕೌರವರ ಕಥೆಯೇ ಎಷ್ಟೋ ವೇಳೆ ಮರೆಯಾಗಿ ಬಿಡುತ್ತದೆ. ಇಷ್ಟು ಸಾಲದೋ ಎನ್ನುವಂತೆ ಕಥೆಯೇ ಅಲ್ಲದ ರಾಜನೀತಿ, ಧರ್ಮಬೋಧೆ, ತತ್ತ್ವವಿಚಾರ, ಆಚಾರ-ವ್ಯವಹಾರಗಳ ನಿರೂಪಣೆ, ಮುಂತಾದುವು ಲೆಕ್ಕವಿಲ್ಲದಷ್ಟು ಶ್ಲೋಕಗಳಲ್ಲಿ ಬರುತ್ತವೆ. ಮಹಾಭಾರತದಲ್ಲಿರುವುದು ಎಲ್ಲಿಯೂ ಇರಬಹುದು; ಆದರೆ ಇಲ್ಲದುದು ಎಲ್ಲಿಯೂ ಇರಲಾರದೆಂದು ಹೇಳಿರುವುದು ಅಕ್ಷರಶಃ ನಿಜವಾಗಿದೆ. ಪ್ರಾಚೀನ ಭಾರತದ ಜ್ಞಾನಕೋಶವೇ ಮಹಾಭಾರತ. ಕವಿಗಳು ಮಾತ್ರ ವಾಲ್ಮೀಕಿಗೆ ದಾಸರಾದರೆ, ಕವಿಗಳಂತೆ ಎಲ್ಲ ಬಗೆಯ ಶಾಸ್ತ್ರಕಾರರೂ, ಎಲ್ಲ ವಿದ್ಯಾನಿರತರೂ ವ್ಯಾಸನ ದಾಸರೇ. ಇದನ್ನೇ 'ವ್ಯಾಸೋಚ್ಛಿಷ್ಟಂ ಜಗತ್ ಸರ್ವಂ' (ಇಡಿಯ ಜಗತ್ತೇ ವ್ಯಾಸರು ಉಂಡು ಮಿಕ್ಕುದು) 'ಭಾರತಃ ಪಂಚಮೋ ವೇದಃ' (ಭಾರತವೇ

ಐವನೆಯ ವೇದ) ಎಂಬ ಪೂರ್ವಸೂಕ್ತಿಗಳು ಪ್ರಮಾಣಿಸುತ್ತವೆ. ಹೀಗೆ ಮಹಾಭಾರತವೆಂದರೆ ಕಾವ್ಯ, ಇತಿಹಾಸ, ನೀತಿ, ಜ್ಞಾನ, ಧರ್ಮ, ತತ್ತ್ವವಿಚಾರ ಎಲ್ಲವೂ ಅಡಕವಾದ ವಿಶ್ವಕೋಶ ವೆಂಬುವನ್ನು ಮರೆಯಬಾರದು. ನಮಲ್ಲಿ ಇದನ್ನು ಓದು ವವರಿಗೆ ಕಾವ್ಯದೃಷ್ಟಿಯಂತೆಯೇ ಧರ್ಮದೃಷ್ಟಿಯೂ ಇದ್ದೇ ಇರುತ್ತದೆ. "ವೇದಪಾರಾಯಣದ ಫಲ, ಗಂಗಾದಿ ತೀರ್ಥ ಸ್ನಾನ ಫಲ, ಕೃಚ್ಛ್ರಾದಿ ತಪಸಿನ ಫಲವು, ಜ್ಯೋತಿಷ್ಟೋಮ ಯಾಗಫಲ, ಮೇದಿನಿಯನೊಲಿದಿತ್ತ ಫಲ, ವಸ್ತ್ರಾದಿ ಕನ್ಯಾದಾನಫಲವಹುದಾದರಿಸಿ ಭಾರತದೊಳೊಂದಕ್ಷರವ ಕೇಳ್ದ ರಿಗೆ" ಎಂಬ ಫಲಶ್ರುತಿ ಭಾರತ ಜನತೆ ಮಹಾಭಾರತದ ಬಗೆಗೆ ಇಟ್ಟುಕೊಂಡಿರುವ ಪೂಜ್ಯಭಾವನೆಗೆ ಸೂಚಕವಾಗಿದೆ. ಕವಿಗಳ, ಪೌರಾಣಿಕರ, ನಾಟಕಕಾರರ, ಕೀರ್ತನಕಾರರ, ಅವಿ ಶ್ರಾಂತ ಯತ್ನಗಳಿಂದ ಇಂದಿಗೂ ಮಹಾಭಾರತ ಭಾರತ ಜನತೆಯ ಮನಸ್ಸಿನಲ್ಲಿ ಹೊಸದಾಗಿಯೇ ಉಳಿದಿದೆ. ಭಗ ವದ್ಗೀತೆಯೊಂದೇ ಲಕ್ಷಾಂತರ ಜನಗಳ ಬಾಳಿಗೆ ಅಂದಿನಿಂದ ಇಂದಿನ ವರೆಗೂ ಬೆಳಕನ್ನೀಯುತ್ತ ಬಂದಿದೆ.

## ೨. ಗ್ರಂಥವಿಸ್ತಾರ

ಸಂಸ್ಕೃತ ಮಹಾಭಾರತದಲ್ಲಿ ಒಂದುಲಕ್ಷಕ್ಕಿಂತ ಹೆಚ್ಚು ಶ್ಲೋಕಗಳಿವೆ. ಶ್ರೀಕೃಷ್ಣನ ಜೀವನಚರಿತ್ರೆಯನ್ನು ಪೂರ್ಣ ವಾಗಿ ವಿವರಿಸುವ 'ಹರಿವಂಶ' ವೆಂಬ ದೊಡ್ಡಭಾಗವನ್ನು ಮಹಾಭಾರತದ ಕಡೆಗೆ ಜೋಡಿಸಲಾಗಿದೆ. ಹರಿವಂಶವನ್ನು ಬಿಟ್ಟರೂ ಉಳಿದ ಭಾಗವೇ ಹದಿನೆಂಟು ಪರ್ವಗಳಾಗುತ್ತದೆ. ಪರ್ವಗಳೆಲ್ಲವೂ ಒಂದೇ ಅಳತೆಯವಲ್ಲ. ಆದಿಪರ್ವದಲ್ಲಿ

ಪಾಂಡವರ ಕಥೆಗಿಂತ ಉಪಕ್ರಮಣಿಕಾಭಾಗವೇ ಅಳತೆಮೀರಿ ಬಂದಿದೆ. ಹದಿನೆಂಟು ಪರ್ವಗಳು ಕ್ರಮವಾಗಿ ಇವು:—
೧. ಆದಿಪರ್ವ, ೨. ಸಭಾಪರ್ವ, ೩ ಅರಣ್ಯಪರ್ವ, ೪. ವಿರಾಟ ಪರ್ವ, ೫. ಉದ್ಯೋಗಪರ್ವ, ೬. ಭೀಷ್ಮಪರ್ವ, ೭. ದ್ರೋಣ ಪರ್ವ, ೮. ಕರ್ಣಪರ್ವ, ೯. ಶಲ್ಯಪರ್ವ, ೧೦. ಸೌಪ್ತಿಕಪರ್ವ. ೧೧. ಸ್ತ್ರೀಪರ್ವ, ೧೨. ಶಾಂತಿಪರ್ವ, ೧೩. ಅನುಶಾಸನಪರ್ವ, ೧೪. ಆಶ್ವಮೇಧಿಕಪರ್ವ, ೧೫. ಆಶ್ರಮವಾಸಿಕಪರ್ವ, ೧೬, ಮೌಸಲಪರ್ವ, ೧೭. ಮಹಪ್ರಸ್ಥಾನಿಕಪರ್ವ ೧೮. ಸ್ವರ್ಗಾ ರೋಹಣಪರ್ವ. ಒಟ್ಟು ಅಧ್ಯಾಯಗಳ ಸಂಖ್ಯೆ ೨೧೯. ಉಪಾಖ್ಯಾನಗಳೆಲ್ಲವನ್ನೂ ಸೇರಿಸಿಕೊಂಡರೆ ಒಂದು ಲಕ್ಷದ ವರೆಗೂ ಪದ್ಯಗಳಾಗುತ್ತವೆ; ಅವನ್ನು ಬಿಟ್ಟರೆ ಮುಖ್ಯ ತಿರುಳು ೨೪೦೦೦ ಶ್ಲೋಕಗಳೇ, ಎಂಬ ಮಾತು ಭಾರತದ ಉಪ ಕ್ರಮಣಿಕೆಯಲ್ಲಿಯೇ ಬಂದಿದೆ :—

"ಚತುರ್ವಿಂಶತಿಸಾಹಸ್ರೀಂ ಚಕ್ರೇ ಭಾರತಸಂಹಿತಾಂ |
ಉಪಾಖ್ಯಾನೈರ್ವಿನಾ ತಾವದ್ಭಾರತಂ ಪ್ರೋಚ್ಯತೇ ಬುಧೈಃ ||"

(I. 102)

## ೩. ಭಾರತದಲ್ಲಿ ಮೂಲ-ಪ್ರಕ್ಷೇಪ ವಿಚಾರ

ಶ್ರದ್ಧಾಳುಗಳಾದ ಭಾವುಕರಿಗೆ ಈ ವಿಚಾರವೇ ಏಳುವುದಿಲ್ಲ. ಭಾರತವಂಶ ಮುಂಬರಲು ಕಾರಣನಾದ ಕೃಷ್ಣದ್ವೈಪಾಯನ ವ್ಯಾಸನೇ ವೇದಗಳನ್ನು ವಿಂಗಡಿಸಿಯಾದ ಮೇಲೆ ಈ ಮಹಾ ಗ್ರಂಥವನ್ನು ಬರೆದನೆಂದು ನಂಬುತ್ತೇವೆ. ಇವರಂತೆ ಹದಿ ನೆಂಟು ಪುರಾಣಗಳನ್ನೂ ಉಪಪುರಾಣಗಳನ್ನೂ ರಚಿಸಿದ ಮಹಾನುಭಾವನೇ ವ್ಯಾಸನೆಂದು ನಮಸ್ಕರಿಸುತ್ತೇವೆ. ಸಾಕ್ಷಾತ್ ಗಣಪತಿಯೇ ವ್ಯಾಸನಿಗೆ ಲಿಪಿಕಾರನಾಗಿ ಬಂದು,

ಗ್ರಂಥವನ್ನು ಬರೆದುಕೊಟ್ಟನೆಂದು ಕಥೆ ಹೇಳುತ್ತೇವೆ. ಆದರೆ ಯಾವ ಅದ್ಭುತವನ್ನೂ ಒಪ್ಪದಿರುವ ಪರೀಕ್ಷಾಬುದ್ಧಿಗೆ ಇವೆಲ್ಲವೂ ಕಟ್ಟುಕಥೆಯಾಗಿ ಕಾಣಿಸುತ್ತದೆ. ಕಳೆದ ನೂರು ವರ್ಷಗಳಿಂದ ಜರ್ಮನಿ, ಫ್ರಾನ್ಸ್, ಇಂಗ್ಲೆಂಡ್, ಅಮೆರಿಕಾ ದೇಶಗಳ ಸಂಸ್ಕೃತ ಸಂಶೋಧಕರು ಮಹಾಭಾರತದಲ್ಲಿ ಮೂಲ ಯಾವುದು, ಪ್ರಕ್ಷೇಪ ಯಾವುದು ಎಂದು ನಿರ್ಣಯಿಸಲು ಅಗಾಧವಾದ ಪರಿಶ್ರಮ ಮಾಡಿದ್ದಾರೆ. ಅವರ ಸಹನೆ, ಯತ್ನಗಳನ್ನು ಎಷ್ಟು ಕೊಂಡಾಡಿದರೂ ಕಡಿಮೆಯೇ; ಆದರೆ ಆ ಪರಿಶ್ರಮಕ್ಕೆ ಸರಿದೂಗುವ ಪ್ರಮಾಣದಲ್ಲಿ ಯಾವ ನಿರ್ಣಯವೂ ಇನ್ನೂ ಸಾಧ್ಯವಾಗಿಲ್ಲದಿರುವುದು ದುರ್ದೈವವೇ ಸರಿ.* ಈ ವಿಮರ್ಶಕರಲ್ಲಿ ಬಂದಿರುವ ಊಹಾವಿಕಲ್ಪಗಳಿಗೆ ಎಲ್ಲೆಯೇ ಇಲ್ಲ. ಕೌರವರೇ ಧರ್ಮಮಾರ್ಗದಲ್ಲಿದ್ದು ವೀರೋಚಿತವಾಗಿ ಮರಣ ಹೊಂದಿದ ಕಥಾನಾಯಕರು; ಮೋಸದಿಂದ ಅವರನ್ನು ವಧಿಸಿ ಪಟ್ಟಕ್ಕೆ ಬಂದವರು ಪಾಂಡವರು. ಕೌರವರ ಪ್ರಶಂಸಾಪರವಾಗಿದ್ದ ಮೂಲಭಾರತವನ್ನು ತಿದ್ದಿಸಿ ಬರೆಯಿಸಿದವರು ಪಾಂಡವರ ಕಡೆಯ ಪುರೋಹಿತರು, ಎಂಬ ಸಿದ್ಧಾಂತಕ್ಕೆ ಒಬ್ಬರು (ಹೋಲ್ಟ್ಸ್‌ಮಾನ್) ಬಂದರೆ, ಇನ್ನೊಬ್ಬರು (ಬ್ಯೂಲೆರ್) ಮಹಾಭಾರತವು ಮೂಲತಃ ಇತಿಹಾಸವೇ ಅಲ್ಲ, ಒಂದು ಧರ್ಮಶಾಸ್ತ್ರ ಎನ್ನುತ್ತಾರೆ. ಕುರು-ಪಾಂಚಾಲವಂಶಗಳ ಐತಿಹಾಸಿಕ ಗಾಥೆಗಳು ಉಳಿದವುಗಳಿಗಿಂತ ಪ್ರಾಚೀನವೆಂದು

---

* ವಿದ್ವಾಂಸರ ಚರ್ಚಾವಿವರಗಳಲ್ಲಿ ಕುತೂಹಲವುಳ್ಳವರು ಇದೇ ಲೇಖಕನ "ಸಂಸ್ಕೃತ ಕಾವ್ಯ" (ಮೈಸೂರು ವಿಶ್ವವಿದ್ಯಾನಿಲಯ)ವನ್ನು ನೋಡಿ.

ಮತ್ತೊಬ್ಬರು (ಹಾಪ್ಕಿನ್ಸ್) ಊಹಿಸುತ್ತಾರೆ. ಮಹಾಭಾರತದ ಅನುಕ್ರಮಣಿಕೆಯಲ್ಲಿ ಬೇರೆ ಬೇರೆ ಗ್ರಂಥಾರಂಭ ಸ್ಥಾನಗಳನ್ನು ಸೂಚಿಸಿರುವುದೂ, ಪಾಣಿನಿಯು 'ಜಯ' ವೆಂದರೆ ಭಾರತ ಯುದ್ಧವೆನ್ನುವುದೂ ವಿದ್ವಾಂಸರು ಇದು ಏಕಕರ್ತೃಕವಲ್ಲ ವೆನ್ನಲು ಮುಖ್ಯ ಕಾರಣ.

ಈಚೆಗೆ ಪುಣೆಯ ಭಂಡಾರಕರ ಸಂಶೋಧನ ಸಂಸ್ಥೆಯು ಭಾರತದ ಪಾಠನಿರ್ಣಯಕ್ಕೆ ಅಮೌಲ್ಯವಾದ ಸಹಾಯ ಮಾಡಿದೆ. ಈಗ ಸಿಕ್ಕುವ ಭಾರತದ ನೂರಾರು ಹಸ್ತಪ್ರತಿ ಗಳೆಲ್ಲವನ್ನೂ ಪರೀಕ್ಷಿಸಿ, ಔತ್ತರೇಯ, ದಾಕ್ಷಿಣಾತ್ಯ ಪಾಠ ಗಳಲ್ಲಿ ಬರುವ ಅನೇಕ ಒಳಭೇದಗಳೆಲ್ಲವನ್ನೂ ವರ್ಗೀಕರಿಸಿ ಕೊಂಡು, ಹೋಲಿಸಿ ನೋಡಿ ಸರ್ವಸಮಂಜಸವಾದ ಮೂಲ ಮಹಾಭಾರತ ಪಾಠವನ್ನು ಪರಿಷ್ಕರಿಸಿ ಅಚ್ಚುಮಾಡುತ್ತಿದೆ. ಆದರೆ ಈಗ ಹದಿನಾರನೆಯ ಶತಮಾನಕ್ಕಿಂತ ಹಿಂದಿನ ಹಸ್ತ ಪ್ರತಿಗಳೇ ಸಿಕ್ಕುವುದಿಲ್ಲವಾದ್ದರಿಂದ ವ್ಯಾಸನೇ ಬರೆದ ಮೂಲ ಪಾಠ ಈ ಪರಿಷ್ಕರಣದಲ್ಲಿ ದೊರೆಯುವುದೆಂದು ಪ್ರತಿಜ್ಞೆ ಮಾಡುವಂತಿಲ್ಲ. ಬಹಳ ಈಚೆಗೆ ಅಥವಾ ಕೆಲವೊಂದು ಪ್ರಾಂತ ಗಳಲ್ಲಿ ನಡೆದ ಪ್ರಕ್ಷೇಪಗಳನ್ನು ಮಾತ್ರ ನಿರ್ಧರಿಸಬಹುದು. ಇವುಗಳಲ್ಲಿ ಕೆಲವನ್ನಿಲ್ಲಿ ಸೂಚಿಸಬಹುದು:—

೧. ಗಣೇಶನು ವ್ಯಾಸನಿಗೆ ಲಿಪಿಕಾರನಾದ ಕಥೆ.

೨. ದ್ರೌಪದೀಸ್ವಯಂವರದಲ್ಲಿ ಕರ್ಣನು ಮತ್ಸ್ಯಯಂತ್ರ ಭೇದನಕ್ಕೆ ಸಿದ್ಧನಾದಾಗ ದ್ರೌಪದಿಯು ತಟ್ಟನೆ ತಾನು ಸೂತಪುತ್ರನಿಗೆ ಮಾಲೆ ಹಾಕುವುದಿಲ್ಲವೆಂದು ಅವನ ತೇಜೋ ವಧೆ ಮಾಡುವ ಪ್ರಸಂಗ.

೩. ಆದಿಪರ್ವದಲ್ಲಿ ಬರುವ ಕಣಿಕನೀತಿ.

೪. 'ವಿರಾಟ' ಮತ್ತು ಭೀಷ್ಮಪರ್ವಗಳಲ್ಲಿ ಬರುವ ದುರ್ಗಾಸ್ತೋತ್ರಗಳು.

೫. ದ್ರೌಪದೀವಸ್ತ್ರಾಪಹರಣ ಪ್ರಸಂಗದಲ್ಲಿ ಅವಳು ಮಾಡುವ ಕೃಷ್ಣಸ್ತೋತ್ರ.

೬. ದುರ್ವಾಸಭಿಕ್ಷೆ ಮತ್ತು ಅಕ್ಷಯಪಾತ್ರೆಯ ಕಥೆ.

೭. ಅರಣ್ಯಪರ್ವದಲ್ಲಿ ಅರ್ಜುನನ ಸಂಗವನ್ನು ಬಯಸಿ ವಿಫಲಳಾದ ಉರ್ವಶಿ ಅವನನ್ನು ನಪುಂಸಕನಾಗೆಂದು ಶಪಿಸುವುದು.

೮. ಮತ್ತೆ ಮತ್ತೆ ಸಂಜಯಾದಿಗಳ ದಿವ್ಯದೃಷ್ಟಿಯ ಉಲ್ಲೇಖ.

ಒಟ್ಟಿನ ಮೇಲೆ ಮೂಲ ಭಾರತವು ಕೌರವ ಪಾಂಡವರ ಯುದ್ಧ ವರ್ಣನೆಯನ್ನು ಮಾತ್ರ ಕುರಿತಿದ್ದಿರಬೇಕೆಂದು ಊಹಿಸಿ, ಭೃಗು-ಆಂಗಿರಸ ವಂಶೀಯರಿಂದ ಕೆಲವು ಪ್ರಕ್ಷೇಪಗಳೂ ಕೂಡಿದಮೇಲೆ ನಮಗಿಂದು ಸಿಕ್ಕುವ ಮಹಾಭಾರತವಾಗಿದೆಯೆಂದು ಕೆಲವರು ಅಭಿಪ್ರಾಯಪಟ್ಟರೆ (ಉದಾಹರಣೆಗೆ—ವಿಂಟರ್‌ನಿಟ್ಸ್ ಅವರು) ರೋಮ್ ನಗರದ ಪ್ರಸಿದ್ಧ ಸಂಶೋಧಕರಾದ ಪಿಸಾನಿ ಅವರು 'ಇದು ಒಬ್ಬ ಕವಿಯ ಬುದ್ಧಿಪೂರ್ವಕ ರಚನೆಯೇ ಹೊರತು ಕೇವಲ ಕಾಕತಾಲೀಯ ಪ್ರಕ್ಷೇಪಗಳ ಕಲಸುಮೇಲೋಗರವಲ್ಲ'ವೆಂಬ ನಿರ್ಣಯಕ್ಕೆ ಬಂದಿದ್ದಾರೆ.*

## ೪. ಕಾಲವಿಚಾರ

ಮೂಲ ಭಾರತ ಅಥವಾ 'ಜಯ'ವು ಕ್ರಿ.ಪೂ. ೪೦೦ರ ವೇಳೆಗೇ ರಚಿತವಾಗಿದ್ದಿರಬಹುದು; ಏಕೆಂದರೆ ಭಾಷೆಯ

ನಯಾಭಾವ, ಛಂದಸ್ಸಿನ ಶೈಥಿಲ್ಯ, ಗದ್ಯವಾಕ್ಯಗಳ ಮಿಶ್ರಣ, ಮುಂತಾದುವುಗಳನ್ನು ನೋಡಿದರೆ ರಾಮಾಯಣಕ್ಕಿಂತ ಪೂರ್ವದ ಕಾಲದಲ್ಲೇ ರಚಿತವಾಗಿರಬಹುದೆನಿಸುತ್ತದೆ. ಆದರೆ ರೋಮ್ ನಗರದ ಹೆಸರು ನಿರ್ದಿಷ್ಟವಾಗಿರುವುದರಿಂದ (II. 28. 49. ಪುಣೆ ಪರಿಷ್ಕರಣ) ಕ್ರಿ.ಪೂ. ೧ ನೆಯ ಶತಮಾನಕ್ಕಿಂತ ಮುಂಚೆ ಈ ಭಾಗ ಹುಟ್ಟಿರಲಾರದು. (ಎಜರ್‌ಟನ್) ಕೃಷ್ಣ, ಅರ್ಜುನ, ಕುರು, ಮುಂತಾದ ವ್ಯಕ್ತಿಗಳನ್ನು ಪ್ರಾಚೀನ ಧರ್ಮ-ಗ್ರಂಥಗಳಲ್ಲಿಯೂ, ವ್ಯಾಕರಣ ಗ್ರಂಥಗಳಲ್ಲಿಯೂ ಸ್ಮರಿಸಿದ್ದಾರೆ. ರಾಮಾಯಣದ ಪಾತ್ರಗಳನ್ನು ಮಾತ್ರ ಸ್ಮರಿಸಿಲ್ಲ. ಭಾರತದಲ್ಲಿ ಕವಿ ಉಪಯೋಗಿಸಿಕೊಂಡ ಸಾಮಗ್ರಿ ಕ್ರಿ.ಪೂ. ಎಷ್ಟೋ ಹಳೆಯದಿರಬಹುದು. ಆದರೂ ಮುಖ್ಯ ಪ್ರಕ್ಷೇಪಗಳು ಕ್ರಿ.ಶ. ೪೦೦ ರವರೆಗೆ ನಡೆದಿರಬಹುದೆಂದು ವಿದ್ವಾಂಸರು ನಂಬುತ್ತಾರೆ. ಅಲ್ಲಿಂದಾಚೆಗೂ ಸಣ್ಣಪುಟ್ಟ ಪ್ರಕ್ಷೇಪಗಳು ನಡೆಯುತ್ತಲೇ ಹೋಗಿವೆ. ಭಾಸ ಕಾಳಿದಾಸರ ಕಾಲದಲ್ಲೇ ಇಂದಿನ ವಿಸ್ತೃತರೂಪ ಬಂದಾಗಿದ್ದಂತೆ ತೋರುತ್ತದೆ. ಕ್ರಿ.ಶ. ಐದನೆಯ ಶತಮಾನದಲ್ಲಿ ಮಹಾಭಾರತವನ್ನು ಹೆಸರಿಸುವ ಶಾಸನಗಳಿವೆ. ಆದ್ದರಿಂದ ಮಹಾಭಾರತವೆಂಬುದು ಪ್ರೊ. ಕೃಷ್ಣಶಾಸ್ತ್ರಿಗಳು ಹೇಳುವಂತೆ "ಸುಮಾರು ೮೦೦ ವರ್ಷ ಬೆಳೆದು ನಿಂತಿರುವ ಮಹಾವೃಕ್ಷ; ಎಂದರೆ ಈಗ್ಗೆ ಸುಮಾರು ೧೫೦೦ ವರ್ಷಗಳ ಕೆಳಗೇ ಅದು ಬೆಳೆದು ಇಂದಿರುವ ರೂಪವನ್ನು ತಾಳಿತು."†

* The Rise of the Mahabharata—*A Volume of Eastern and Indian Studies presented to prof. F. W. Thomas.*

† ವಚನಭಾರತ, ಪೀಠಿಕೆ, ಪು. ೨೫.

೨೪೦೦೦ ಶ್ಲೋಕಗಳ ಪಾಠ ವ್ಯಾಸಕೃತಿಯೆಂದೂ ಲಕ್ಷ ಶ್ಲೋಕಗಳ ಬೃಹದ್ರೂಪ ವೈಶಂಪಾಯನ ಪ್ರೋಕ್ತವೆಂದೂ ಸ್ಥೂಲವಾಗಿ ಹೇಳಬಹುದು. ಈ ಬೆಸುಗೆಯನ್ನು ಬಿಡಿಸಿ ತೋರಿಸುವುದು ಇನ್ನೂ ಇದುವರೆಗೆ ಶಕ್ಯವಾಗಿಲ್ಲ. ಸಾಂಪ್ರದಾಯಿಕವಾಗಿ ಹೇಳುವುದನ್ನು ನಂಬಿದರೆ ಐತಿಹಾಸಿಕವಾಗಿ ಕುರುಪಾಂಡವರ ಯುದ್ಧವು ಕ್ರಿ.ಪೂ. ೩೧೦೨ ರಲ್ಲಿ ನಡೆದಿರಬೇಕು. ಆದರೆ ಇತಿಹಾಸ ಸಂಶೋಧಕರು ಇದನ್ನು ಒಪ್ಪುವುದಿಲ್ಲ, ಭಾರತ ಯುದ್ಧದ ಕಾಲ ಕ್ರಿ.ಪೂ. ೧೪೦೦ ಇರಬಹುದೆಂದು ಊಹಿಸುತ್ತಾರೆ. ಭಾರತ ಯುದ್ಧದ ಕಾಲವೂ ಭಾರತ ಗ್ರಂಥದ ಕಾಲವೂ ಬೇರೆ ಬೇರೆಯೆಂಬುದು ಆಧುನಿಕರ ಅಭಿಪ್ರಾಯ.

### ೫. ಮಹಾಭಾರತದ ಕಥಾಭಿತ್ತಿ

ಮಹಾಭಾರತದ ಕಥೆಯ ಪರಿಚಯ ಯಾರಿಗೆ ತಾನೆ ಇಲ್ಲ? ಅದರ ಮೂಲರೂಪವನ್ನು ಒಬ್ಬ ಕವಿ ಒಂದು ಉದ್ದೇಶವನ್ನಿಟ್ಟು ಕೊಂಡು ಬರೆದಿರುವಂತಿದೆಯೆ ಅಥವಾ ಎಲ್ಲವೂ ಒಂದು ಬರಿಯ ಕಲಸುಮೇಲೋಗರವೇ ಎಂಬುದು ಮೊದಲು ಬರುವ ಸಮಸ್ಯೆ. ವ್ಯಾಸನ ವಿವಕ್ಷೆಯೇನು? ಅವನ ಗುರಿಯೇನು? ಆದಿ-ಮಧ್ಯ-ಅಂತ್ಯಗಳಿಗೆಲ್ಲ ಏನಾದರೂ ಸಹಜವಾದ ಸಾಮಂಜಸ್ಯ ಗೋಚರವಾಗುತ್ತದೆಯೆ? ಕಾವ್ಯದ ಅಂತರಾಳದಲ್ಲಿ ಅಡಗಿರುವ ಐಕ್ಯವೇನಾದರೂ ಉಂಟೆ? ಈ ಪ್ರಶ್ನೆಗಳನ್ನು ಎತ್ತಿದಲ್ಲದೆ, ಈ ಪ್ರಶ್ನೆಗಳಿಗೆ ಒಂದು ಬಗೆಯ ಪರಿಹಾರವನ್ನು ಹೇಳಿದಲ್ಲದೆ ಮಹಾಭಾರತದ ವಿಮರ್ಶೆ ದುಷ್ಕರವಾಗಿಬಿಡುತ್ತದೆ. ನಾವು ಮೇಲೆ ನೋಡಿದಂತೆ ಪಾಶ್ಚಾತ್ಯ ವಿದ್ವಾಂಸರು ಈ ಸಮಸ್ಯೆಗಳಿಗೆಲ್ಲಾ ನಕಾರವನ್ನೇ ಮುಂದೆ ಮಾಡುವುದು

ಹೆಚ್ಚು; ಅವರಿಂದ ನಮಗೆ ಸಿಕ್ಕುವ ಸಹಾಯ ಅಲ್ಪ. ಮಹಾಭಾರತದ ವಿಮರ್ಶೆಯನ್ನು ನಮ್ಮ ಪೂರ್ವಿಕರಾರೂ ಮಾಡಿಲ್ಲವೆ? ಅವರು ಭಾರತದ ತಾತ್ಪರ್ಯವನ್ನು ಯಾವ ರೀತಿ ವಿವರಿಸುತ್ತಿದ್ದರು? ಎಂಬುದನ್ನು ಈ ಸಂದರ್ಭದಲ್ಲಿ ಗಮನಿಸಬೇಕು. ಮಹಾಭಾರತವನ್ನು ಆಧಾರ ಗ್ರಂಥವೆಂದು ತಿಳಿದು, ಸ್ಮೃತಿಯೆಂದು ಗೌರವಿಸಿ, ಶಬರಸ್ವಾಮಿ, ಕುಮಾರಿಲ ಭಟ್ಟ, ಶಂಕರ, ಅಭಿನವಗುಪ್ತ, ರಾಮಾನುಜ, ಮಧ್ವ ಮುಂತಾದ ವೇದಾಂತವಿಶಾರದರೂ ವಸಿಷ್ಠ, ಯಾಜ್ಞವಲ್ಕ್ಯ, ಆಪಸ್ತಂಬ ಮುಂತಾದ ಧರ್ಮಸೂತ್ರಕಾರರೂ ಪಂಕ್ತಿಗಳನ್ನು ಉದಾಹರಿಸಿರುವುದು ನಿಜ. ಇವರಾರೂ ಯುದ್ಧ ವರ್ಣನೆಗೆ ಪ್ರಾಶಸ್ತ್ಯ ಕೊಡದೆ, ಭಗವದ್ಗೀತಾದಿ ತತ್ತ್ವವಿಚಾರಗಳಿಗೇ, ನೀತಿ ವಾಕ್ಯಗಳಿಗೇ, ಹೆಚ್ಚಿನ ಮನ್ನಣೆಯನ್ನೀಯುತ್ತಿದ್ದುದು ವ್ಯಕ್ತವಾಗುತ್ತದೆ. ಭಾಗವತ ಸಂಪ್ರದಾಯದವರೆಲ್ಲರೂ ಭಗವದ್ಗೀತೆಯೇ ಮಹಾಭಾರತದ ತಿರುಳೆಂದು ತಿಳಿಯುವುದು ಸುಪ್ರಸಿದ್ಧ. ಈ ವಿಚಾರಸರಣಿಯನ್ನು ಅನುಸರಿಸಿದರೆ ಭಗವದ್ಗೀತೆಗಾಗಿ ಮಹಾಭಾರತ ರಚಿತವಾಯಿತೆಂದು ಹೇಳಬೇಕಾಗುತ್ತದೆ; ಮಹಾಭಾರತದ ಒಂದು ಸಣ್ಣ ಅಂಗವಾಗಿ ಭಗವದ್ಗೀತೆ ಬರುವುದೆಂದಲ್ಲ. ಇಡಿಯ ಭಗವದ್ಗೀತೆಯೇ ಪ್ರಕ್ಷೇಪವೆಂಬ ವಾದಕ್ಕಂತೂ ಆಸ್ಪದವೇ ಇಲ್ಲ. ಈ ಶಾಸ್ತ್ರದೃಷ್ಟಿ ಒತ್ತಟ್ಟಿಗಿರಲಿ. ಕೇವಲ ಕಾವ್ಯದೃಷ್ಟಿಯಿಂದಲೇ ಮಹಾಭಾರತವನ್ನು ವಿಮರ್ಶಿಸುವ ಪ್ರಯತ್ನವನ್ನು ಆನಂದವರ್ಧನನ ಧ್ವನ್ಯಾಲೋಕದಲ್ಲಿ* ನೋಡಬಹುದು. ಮಹಾಭಾರತದ ಆದಿ,

* ಕುತೂಹಲಿಗಳು ಇದೇ ಲೇಖಕನ ಕನ್ನಡ ಧ್ವನ್ಯಾಲೋಕ ನೋಡಿ.

ಮಧ್ಯ, ಅಂತ್ಯ, ಎಲ್ಲವನ್ನೂ ಪರೀಕ್ಷಿಸಿ ಅವನು ಕೊಡುವ ನಿರ್ಣಯವಿದು :—ಅರ್ಥ ಕಾಮಗಳ ನಿರುಪಯುಕ್ತತೆಯನ್ನು ತೋರಿಸುವುದೇ ವ್ಯಾಸರ ಲಕ್ಷ್ಯ. ಧರ್ಮಕ್ಕೆ ಅವಿರೋಧ ವಾದ ಅರ್ಥಕಾಮಗಳ ಮೂಲಕ ಮಾನವನು ಮೋಕ್ಷವೆಂಬ ಪರಮಪುರುಷಾರ್ಥವನ್ನು ಸಾಧಿಸಬೇಕೆಂಬುದನ್ನು ಅವರು ಗ್ರಂಥದ ಮೂಲಕ ಲೋಕಕ್ಕೆ ಉಪದೇಶಿಸಿದ್ದಾರೆ. ವೈರಾಗ್ಯ, ನಿಃಸ್ವಾರ್ಥಬುದ್ಧಿ, ಪ್ರಶಾಂತಚಿತ್ತ, ಇಂದ್ರಿಯಸಂಯಮ— ಇವುಗಳ ವಿಸ್ತೃತನಿರೂಪಣೆಗೆಲ್ಲ ಇದೇ ಗುರಿ. ಕಾವ್ಯದಲ್ಲಿ ವೈರಾಗ್ಯಕ್ಕೂ ಮೋಕ್ಷಕ್ಕೂ ಸ್ಥಾನವುಂಟೆ? ಎಂದು ಕೇಳಿವರೆ 'ಉಂಟೇ ಉಂಟು; ಅದನ್ನೇ ಆಲಂಕಾರಿಕರು ಶಾಂತರಸವೆನ್ನು ವುದು' ಎಂಬ ತೀರ್ಮಾನಕ್ಕೆ ಬರುತ್ತಾನೆ. ಇದನ್ನು ಪರಂ ಪರಾಗತವಾದ ದೃಷ್ಟಿಯೆಂದರೆ ಈ ದೃಷ್ಟಿಯಲ್ಲಿ ಕಥೆಗೆಲ್ಲ ಸಾಮಂಜಸ್ಯ ಹೇಗೆ ಬರುವುದೆಂಬುವನ್ನೀಗ ನೋಡಬಹುದು. ಸಂಪೂರ್ಣ ಮಹಾಭಾರತಕ್ಕೆ 'ಭಾರತಭಾವದೀಪ' ವೆಂಬ ಟೀಕೆಯನ್ನು ಬರೆದಿರುವ ನೀಲಕಂಠನು ಭಾರತದ ತಾತ್ಪರ್ಯ ವನ್ನೆಲ್ಲ ಸಂಗ್ರಹಿಸುವ ಶ್ಲೋಕಗಳೆಂದು ಈ ಎರಡನ್ನು ನಿರ್ದೇಶಿಸುತ್ತಾನೆ:—

ದುರ್ಯೋಧನೋ ಮನ್ಯುಮಯೋ ಮಹಾದ್ರುಮಃ
ಸ್ಕಂಧಃ ಕರ್ಣಃ ಶಕುನಿಸ್ತಸ್ಯ ಶಾಖಾಃ ।
ದುಃಶಾಸನಃ ಫಲಪುಷ್ಪೇ ಸಮೃದ್ಧೇ
ಮೂಲಂ ರಾಜಾ ಧೃತರಾಷ್ಟ್ರೋಽಮನೀಷೀ ॥
ಯುಧಿಷ್ಠಿರೋ ಧರ್ಮಮಯೋ ಮಹಾದ್ರುಮಃ
ಸ್ಕಂಧೋಽರ್ಜುನೋ ಭೀಮಸೇನೋಽಸ್ಯ ಶಾಖಾಃ ।
ಮಾದ್ರೀಸುತೌ ಪುಷ್ಪಫಲೇ ಸಮೃದ್ಧೇ
ಮೂಲಂ ಕೃಷ್ಣೋ ಬ್ರಹ್ಮ ಚ ಬ್ರಾಹ್ಮಣಾಶ್ಚ ॥

(I. i. ೧೧೦-೧೧೧)

[ದುರ್ಯೋಧನನು ಕ್ರೋಧವೆಂಬ ಮಹಾವೃಕ್ಷ. ಕಾಂಡವೇ ಕರ್ಣ. ಅದರ ಕೊಂಬೆಗಳೇ ಶಕುನಿ. ಅದರ ಫಲಪುಷ್ಪ ಸಮೃದ್ಧಿಯೇ ದುಶ್ಶಾಸನ. ಅವಿವೇಕಿಯಾದ ದೊರೆ ಧೃತ ರಾಷ್ಟ್ರನೇ ಬೇರು. ಯುಧಿಷ್ಠಿರನು ಧರ್ಮವೆಂಬ ಮಹಾ ವೃಕ್ಷ. ಕಾಂಡವೇ ಅರ್ಜುನ ಅದರ ಕೊಂಬೆಗಳೇ ಭೀಮ ಸೇನ. ಅದರ ಫಲಪುಷ್ಪಸಮೃದ್ಧಿಯೆಂದರೆ ನಕುಲಸಹದೇವರೇ. ಕೃಷ್ಣ, ಬ್ರಹ್ಮಶಕ್ತಿ, ಮತ್ತು ಬ್ರಾಹ್ಮಣರೇ ಬೇರು !]

ಹೀಗೆ ಮಹಾಭಾರತದ ಮಹಾಯುದ್ಧ ಕೇವಲ ಎರಡು ಸೈನ್ಯಗಳ ಯುದ್ಧವಲ್ಲ ; ವಿಶ್ವದಲ್ಲಿ ನಿರಂತರವೂ ಸಾಗಿರುವ ಧರ್ಮ-ಅಧರ್ಮಗಳ ಸ್ಪರ್ಧೆ. ಯುಧಿಷ್ಠಿರನು ಧರ್ಮವೃಕ್ಷ; ದುರ್ಯೋಧನನೇ ಅಧರ್ಮವೃಕ್ಷ. ಇತ್ತ ಕಡೆ ಕೃಷ್ಣನು ಧರ್ಮದ ಚಾಲಕಶಕ್ತಿ ; ಬ್ರಹ್ಮಬಲದ ಪ್ರತಿನಿಧಿ. ಅತ್ತಕಡೆ ಅರಸನ ಅವಿವೇಕ ಅಧರ್ಮದ ಪ್ರಚೋದಕ ಶಕ್ತಿ ; ಧೃತ ರಾಷ್ಟ್ರನ ಹೊರಗಣ್ಣು ಮಾತ್ರವೇ ಕುರುಡಲ್ಲ, ಒಳಗಣ್ಣೂ ಕುರುಡೇ. ಕರ್ಣ ಶಕುನಿ ದುಶ್ಶಾಸನರಿಗೆ ದುರ್ಯೋಧನ ಆಶ್ರಯದಾತ; ಭೀಮಾರ್ಜುನ ಯಮಳರಿಗೆ ಯುಧಿಷ್ಠಿರ ಆಶ್ರಯದಾತ. ಭೀಮಾರ್ಜುನಾದಿಗಳೇ ಯುದ್ಧದಲ್ಲಿ ದೊಡ್ಡ ಪಾತ್ರಧಾರಿಗಳಾದರೂ, ಧರ್ಮರಾಯನ ಅಂಕೆಯಲ್ಲಿ ಅವರು ಇರತಕ್ಕವರು. ಸ್ವಭಾವತಃ ಧರ್ಮನಿರತನಾದ ಯುಧಿಷ್ಠಿರ ಕೃಷ್ಣನ ಸಲಹೆಯಿಲ್ಲದೆ ಏನನ್ನೂ ಮಾಡುವವನಲ್ಲ. ಧರ್ಮ ಸಂಸ್ಥಾಪನೆಯ ಕೆಲಸ ನೇರವಾಗಿ ಯುದ್ಧಮಾಡದ ಕೃಷ್ಣನದೇ ಆಗುತ್ತದೆ. ಮಹಾಭಾರತದಲ್ಲಿ ಉಳಿದೆಲ್ಲರಿಗಿಂತಲೂ ಹೆಚ್ಚಿನ ಪ್ರಾಶಸ್ತ್ಯ ಅವನ ಪಾತ್ರಕ್ಕೆ ಪ್ರಾಪ್ತವಾಗುತ್ತದೆ. ಕೃಷ್ಣನ ದೌತ್ಯ ಬರುವ ಉದ್ಯೋಗಪರ್ವವೇ ಮಹಾಭಾರತದ ಸಾರ

ವೆಂಬ ಪ್ರಾಚೀನೋಕ್ತಿಯನ್ನು ನೀಲಕಂಠನು ಉದಾಹರಿಸಿದ್ದಾನೆ:—

'ಭಾರತೇ ಸಾರಮುದ್ಯೋಗಮಿತಿ ವೃದ್ಧಾನುಶಾಸನಮ್'

ಧರ್ಮವನ್ನೇಕೆ ಮಾಡಬೇಕು? ಎಂಬ ಪ್ರಶ್ನೆಗೆ ಐಹಿಕ ಕಾಮ, ಅರ್ಥಗಳ ಲಾಭಕ್ಕಾಗಿ ಎಂಬ ಉತ್ತರ ಮಹಾಭಾರತಕ್ಕೆ ಸಮ್ಮತವಲ್ಲ. ಐಹಿಕ ಕಾಮಾರ್ಥಗಳು ಸಿದ್ಧಿಸದೆಯೂ ಇರಬಹುದು. ಧರ್ಮವು ಐಹಿಕ ಚಿತ್ತಶುದ್ಧಿ ಹಾಗು ಶಾಂತಜೀವನಕ್ಕಾಗಿ, ಮತು ಆಮುಷ್ಮಿಕ ಮುಕ್ತಿಗಾಗಿ ಎಂಬುದೇ ವ್ಯಾಸರ ಸಿದ್ಧಾಂತವೆಂದು ನೀಲಕಂಠನು ಬರೆಯುತ್ತಾನೆ:—

ಧರ್ಮಾದಿತ್ರಯಮರ್ಥಕಾಮಕರಣಪ್ರೀತ್ಯರ್ಥಮಿತ್ಯಲ್ಪಕಾಃ।
ಧೀಶುದ್ಧಿಕ್ರತುಜೀವನಸಾರ್ಥಕತಯಾ ಮುಕ್ತ್ಯರ್ಥಮಿತ್ಯುತ್ತಮಾಃ॥

ಹೀಗೆ ಪುರುಷಾರ್ಥಗಳ ಪರಸ್ಪರ ಸ್ಪರ್ಧೆಯನ್ನು ಅನೇಕ ಪಾತ್ರಗಳ ಮೂಲಕ ವ್ಯಾಸರು ತೋರಿಸಿದ್ದಾರೆಂಬುದು ಸಾಂಪ್ರದಾಯಿಕ ದೃಷ್ಟಿ. ಮಹಾಭಾರತದ ಆಧುನಿಕ ವಿಮರ್ಶಕಾಗ್ರೇಸರರೆನಿಸಿದ ಡಾ॥ ಸುಕಠಣಕರ ಅವರೂ ಕೂಡ ಕೃಷ್ಣನ ಪಾತ್ರವನ್ನು ತಿಳಿದಲ್ಲದೆ ಮಹಾಭಾರತವನ್ನು ತಿಳಿಯುವುದು ಶಕ್ಯವಲ್ಲವೆಂದು ಒಮ್ಮೆ ಹೇಳಿದ್ದುಂಟು.* ಹೀಗೆ ಧೃತರಾಷ್ಟ್ರನ ಅವಿವೇಕದಿಂದಾಗಿ ಅಧರ್ಮವು ದುರ್ಯೋಧನಾದಿಗಳಲ್ಲಿ ಅಂಕುರಿಸಿ, ಪಲ್ಲವಿಸಿ, ಹೂ-ಹೀಚು-ಹಣ್ಣಾಗುವುದನ್ನೂ, ಧರ್ಮವು ಯುಧಿಷ್ಠಿರನಲ್ಲಿ ಏಕವಿಧವಾಗಿ ನೆಲೆಗೊಂಡು ಅರಳುವುದನ್ನೂ ಮಹಾಭಾರತದ ಮುಖ್ಯಕಥಾಸೂತ್ರವೆನ್ನಬಹುದಾಗಿದೆ.

---

* A. D. Pusalkar: *Studies in the Epics and Puranas*, P. 64, note 15.

ಈ ದೃಷ್ಟಿಯಿಂದ ಮುಖ್ಯ ಘಟನೆಗಳನ್ನು ಹೀಗೆ ಸಂಗ್ರಹಿಸ ಬಹುದು :—

## ಆದಿಪರ್ವ

ಭರತವಂಶದಲ್ಲಿ ಪ್ರಸಿದ್ಧನಾದ ಶಂತನು ಮಹಾರಾಜನ ಮಗನೇ ಭೀಷ್ಮ. ಈತನು ತಂದೆಯ ಆಸೆಯನ್ನು ಪೂರೈಸುವ ಶ್ರದ್ಧೆಯಿಂದ ಬ್ರಹ್ಮಚರ್ಯ ವ್ರತವನ್ನು ಕೈಕೊಂಡು ರಾಜ್ಯಕ್ಕೆ ಮಲತಾಯಿಯಾದ ಸತ್ಯವತಿಯ ಮಕ್ಕಳನ್ನೇ ಉತ್ತರಾಧಿಕಾರಿಗಳನ್ನಾಗಿ ಮಾಡುವ ಸತ್ಯಪ್ರತಿಜ್ಞೆ ಮಾಡಿದನು. ಮಹಾಭಾರತಕ್ಕೆ ಆದಿ ಈ ನಿಃಸ್ವಾರ್ಥ ಪುರುಷನ ಅದ್ವಿತೀಯ ತ್ಯಾಗ; ದುರ್ಬಲನ ತ್ಯಾಗವಲ್ಲ; ಪರಶುರಾಮನ ಶಿಷ್ಯನಾಗಿ ಲೋಕೈಕ ವೀರನೆನಿಸಿದವನ ಅದ್ಭುತತ್ಯಾಗ. ಭುಜಬಲದಿಂದ ಕನ್ಯೆಯರನ್ನು ಗೆದ್ದು ತಂದು ತಮ್ಮಂದಿರಿಗೆ ಮದುವೆಮಾಡಿದರೂ ಅವರಿಗೆ ಸಂತಾನವಾಗಲಿಲ್ಲ. ಸತ್ಯವತಿಗೆ ಪರಾಶರರಿಂದ ಪೂರ್ವದಲ್ಲೇ ಜನಿಸಿದ್ದ ಮಗ ವ್ಯಾಸ. ಆ ತಪಸ್ವಿಯನ್ನು ಭೀಷ್ಮನು ಪ್ರಾರ್ಥಿಸಿ ತನ್ನ ತಮ್ಮಂದಿರ ಪತ್ನಿಯರಲ್ಲಿ 'ನಿಯೋಗ'ದಿಂದ ಪಡೆದ ಮಕ್ಕಳೇ ಧೃತರಾಷ್ಟ್ರ ಮತ್ತು ಪಾಂಡು. ದಾಸಿಯಲ್ಲಿ ಇದೇ ರೀತಿ ಜನಿಸಿದವನೇ ವಿದುರ. ಇವರಲ್ಲಿ ಧೃತರಾಷ್ಟ್ರನು ಹಿರಿಯನಾದರೂ ಹುಟ್ಟುಗುರುಡನಾದ್ದರಿಂದ ಕಿರಿಯನಾದ ಪಾಂಡುವಿಗೇ ಪಟ್ಟವಾಯಿತು. ಪಾಂಡುವಿಗೆ ಶಾಪವಿದ್ದುದರಿಂದ ಮಕ್ಕಳಾಗುವಂತಿರಲಿಲ್ಲ. ಕುಂತಿಯು ಋಷಿಗಳ ಅನುಗ್ರಹದಿಂದ, ಪತಿಯ ಅಪ್ಪಣೆಯ ಮೇರೆ ದೇವತೆಗಳ ಮೂಲಕ ಪಡೆದ ಮೂವರೇ ಯುಧಿಷ್ಠಿರ, ಭೀಮ ಮತ್ತು ಅರ್ಜುನ. ಹೀಗೆಯೇ ಮಾದ್ರಿಯೂ ನಕುಲ ಸಹದೇವರನ್ನು ಪಡೆದಳು. ಇವರೆಲ್ಲರೂ ಹುಟ್ಟಿದುದು ತಪೋವನದಲ್ಲಿ; ರಾಜಧಾನಿಯಲ್ಲಲ್ಲ;

ಅಲ್ಲಿಯೇ ಸ್ವಲ್ಪಕಾಲ ಬೆಳೆದರು. ಮದುವೆಯಾಗುವ ಮೊದಲೇ ಕುಂತಿ ಸೂರ್ಯೋಪಾಸನೆಯಿಂದ ಪಡೆದಿದ್ದ ಮಗ ಕರ್ಣ. ತಾಯಿ ಶಿಶುವನ್ನು ಗಂಗೆಯಲ್ಲಿ ಬಿಟ್ಟುದರಿಂದ ಅವನು ಸೂತನಿಗೆ ಸಿಕ್ಕಿ ಅಲ್ಲಿ ಬೆಳೆಯುತ್ತಿದ್ದನು. ಪಾಂಡುವಿನ ಮರಣಾನಂತರ ಬಾಲಕರಾದ ಪಂಚಪಾಂಡವರೂ ಹಸ್ತಿನಾಪುರಕ್ಕೆ ಅರಮನೆಗೆ ಬಂದರು. ಧೃತರಾಷ್ಟ್ರನ ಹೆಸರಿನಲ್ಲೇ ಭೀಷ್ಮನು ರಾಜ್ಯಭಾರ ಮಾಡಿಸುವುದು ಅನಿವಾರ್ಯವಾಯಿತು. ಈ ವೇಳೆಗೆ ಧೃತರಾಷ್ಟ್ರನಿಗೂ ದುರ್ಯೋಧನ, ದುಶ್ಯಾಸನ, ಮುಂತಾದ ನೂರು ಜನ ಗಂಡು ಮಕ್ಕಳಾಗಿದ್ದರು. ಮಕ್ಕಳಿಗೆಲ್ಲ ಶಸ್ತ್ರಾಭ್ಯಾಸವನ್ನು ಮೊದಲು ಕೃಪಾಚಾರ್ಯರು, ಆಮೇಲೆ ದ್ರೋಣಾಚಾರ್ಯರು ಮಾಡಿಸಬೇಕೆಂದು ಏರ್ಪಡಿಸಲಾಯಿತು. ಆಗಲೇ ದುರ್ಯೋಧನಾದಿಗಳಲ್ಲಿ ಸ್ಪರ್ಧೆ, ಮತ್ಸರಗಳು ಮೊಳೆತುವು. 'ನಮ್ಮ ತಂದೆಯೇ ನಿಜವಾಗಿ ಜ್ಯೇಷ್ಠ; ಈಗ ಪಟ್ಟಾಭಿಷಿಕ್ತ; ಕ್ರಮವಾಗಿ ಮುಂದೆ ರಾಜ್ಯ ನಮಗೇ ಬರಬೇಕು. ಏನೋ ಎರಡು ದಿನ ಪಾಂಡು ರಾಜನಾದ ಮಾತ್ರಕ್ಕೆ ಕಾಡಲ್ಲಿ ಹುಟ್ಟಿದ ಇವರಿಗೆ ರಾಜ್ಯದ ಹಕ್ಕೆಲ್ಲಿಂದ ಬರಬೇಕು? ಹೇಗಾದರೂ ಮಾಡಿ ಇವರನ್ನು ತೀರಿಸಿಬಿಟ್ಟರೆ ನಮ್ಮ ಅಧಿಕಾರಕ್ಕೆ ಚ್ಯುತಿಯೇ ಇಲ್ಲ' ಎಂಬ ಭಾವನೆ ಉದಿಸಿತು. ಪಾಂಡವರು ತಮಗಿಂತ ಬಲಿಷ್ಠರೆಂಬುದನ್ನು ನೋಡಿ ನೋಡಿ ಮತ್ಸರ ಮತ್ತಷ್ಟು ಬೆಳೆಯಿತು. ದುರ್ಯೋಧನನಿಗೆ ಭೀಮನೆಂದರೆ ಮಹಾದ್ವೇಷ. ಒಮ್ಮೆ ಮಲಗಿದ್ದ ಭೀಮನನ್ನು ಕೈಕಾಲು ಕಟ್ಟಿ ನೀರೊಳಕ್ಕೆ ಹಾಕಿಸಿದನು. ಮತ್ತೊಮ್ಮೆ ನಿದ್ದೆಯಲ್ಲಿದ್ದ ಅವನ ಮೇಲೆ ವಿಷಸರ್ಪಗಳನ್ನು ಬಿಡಿಸಿದನು. ಇನ್ನೊಮ್ಮೆ ಅವನಿಗೆ ವಿಷಾನ್ನವನ್ನುಣಿಸಿದನು. ದೈವಸಹಾಯದಿಂದ ಭೀಮನು ಎಲ್ಲ

ಕುತ್ತಗಳಿಂದಲೂ ಪಾರಾದನು. ವಿದುರನು ಪಾಂಡವರ ವಿಷಯದಲ್ಲಿ ಯಾವಾಗಲೂ ಅಕ್ಕರೆಯಿಂದಲೇ ಇದ್ದನು. ದ್ರೋಣಾಚಾರ್ಯರ ಶಿಷ್ಯರಲ್ಲೆಲ್ಲ ಅರ್ಜುನನು ಧನುರ್ವಿದ್ಯಾ ಪ್ರವೀಣನೆನಿಸಿ ಗುರುವಿಗೆ ಅಚ್ಚುಮೆಚ್ಚಾದನು. ಶಸ್ತ್ರಾಸ್ತ್ರ ಕೌಶಲವನ್ನು ಪರೀಕ್ಷಿಸುವ ದಿನ ಅರ್ಜುನನನ್ನು ಸರಿಗಟ್ಟು ವವರೇ ಇಲ್ಲವೆ ಎಂದು ದುರ್ಯೋಧನನು ಪರಿತಪಿಸುತ್ತಿರುವ ವೇಳೆಗೆ ಸರಿಯಾಗಿ ಕರ್ಣನು ಬಂದು ತನ್ನ ಹಸ್ತಲಾಘವವನ್ನು ತೋರಿಸಿ ಎಲ್ಲರೂ ತಲೆದೂಗುವಂತೆ ಮಾಡಿದನು; ಅರ್ಜುನ ನನ್ನು ದ್ವಂದ್ವ ಯುದ್ಧಕ್ಕೆ ಕರೆದನೋ ಇಲ್ಲವೋ ದುರ್ಯೋ ಧನನಿಗೆ ಪರಮಾನಂದವಾಯಿತು. ಸೂತಪುತ್ರನೊಡನೆ ಸರಿ ಸಮವಾಗಿ ನಿಂತು ರಾಜಪುತ್ರರು ಯುದ್ಧಮಾಡುವರೆ ? ಎಂಬ ಪ್ರಶ್ನೆ ಬಂದು ಕರ್ಣನು ತಲೆತಗ್ಗಿಸುವಂತಾದಾಗ, ದುರ್ಯೋ ಧನನು ಓಡಿ ಬಂದು ಅವನನ್ನು ಆಗಿಂದಾಗಲೇ ಅಂಗರಾಜ್ಯದ ಅರಸೆಂದು ಪಟ್ಟಾಭಿಷೇಕ ಮಾಡಿದನು. ಕರ್ಣದುರ್ಯೋಧನರ ಸ್ನೇಹಪಾಶ ಅಂದಿನಿಂದ ಜೀವವೊಂದು, ದೇಹವೆರಡು ಎನ್ನು ವಂತೆ ಅವರನ್ನು ಬೆಸೆಯಿತು. ಇತ್ತ ಗುರುದಕ್ಷಿಣೆಯೆಂದು ದ್ರೋಣರು ಶಿಷ್ಯರಿಂದ ಪಾಂಚಾಲರಾಜ ದ್ರುಪದನ ಮಾನ ಭಂಗ ಮಾಡಿದರು; ಅರ್ಧ ರಾಜ್ಯವನ್ನೂ ಕಸಿದುಕೊಂಡರು. ದ್ರೋಣನ ಮೇಲೆ ಅವನ ವೈರ ಆಗ ಅಂಕುರಿಸಿತು.

ಜನರು ಯುಧಿಷ್ಠಿರನ ಗುಣಗಳನ್ನು ಕೊಂಡಾಡುತ್ತ ಅವನೇ ಮುಂದಿನ ಅರಸನಾಗಬೇಕೆಂದು ಬಯಸುತ್ತಿದ್ದುದು ದುರ್ಯೋ ಧನನಿಗೆ ತಿಳಿದೊಡನೆಯೇ ಪಾಂಡವರ ನಿರ್ಮೂಲನಕ್ಕಾಗಿ ಅವನು ಕರ್ಣ ಶಕುನಿಗಳೊಡನೆ ಮತ್ತೆ ಮತ್ತೆ ದುರಾಲೋಚನೆ ಮಾಡುತ್ತಲೇ ಇದ್ದನು. ಪಾಂಡವರನ್ನು ಊರಿಂದ ದೂರ

ಮಾಡಿದಲ್ಲದೆ ಜನರ ಅನುರಾಗ ತಮಗೆ ದೊರೆಯದೆಂದು ತಿಳಿದ ದುರ್ಯೋಧನನು ತನ್ನ ದುರಭಿಸಂಧಿಗೆ ಧೃತರಾಷ್ಟ್ರ ನಿಂದಲೂ ಒಪ್ಪಿಗೆ ಪಡೆದನು. ಒಂದು ನೆವ ಹೇಳಿ ಪಾಂಡವ ರನ್ನು ಕುಂತಿಯೊಡನೆ ವಾರಣಾವತಕ್ಕೆ ಸಾಗುಹಾಕಿದರು. ವಾರಣಾವತದಲ್ಲಿ ಪಾಂಡವರಿಳಿಯಲು ಅರಗಿನ ಮನೆಯನ್ನು ಕಟ್ಟಿಸುವ ಏರ್ಪಾಡನ್ನು ಆಗಲೇ ದುರ್ಯೋಧನ ಮಾಡಿ ಯಾಗಿದ್ದಿತು. ವಿದುರನಿಗೆ ಇದರ ಸುಳಿವು ಗೊತ್ತಿದ್ದುದರಿಂದ ಆತನು ಸೂಕ್ಷ್ಮವಾಗಿ ಪಾಂಡವರನ್ನು ಎಚ್ಚರಿಸಿಯೇ ಬೀಳ್ಕೊಟ್ಟಿದ್ದನು. ಆಮೇಲೆ ಒಬ್ಬ ಚಾರನ ಮೂಲಕ ಅವರು ತಪ್ಪಿಸಿಕೊಳ್ಳುವಂತೆ ಗುಪ್ತವಾದ ಸುರಂಗಮಾರ್ಗವನ್ನೂ ಮಾಡಿಸಿಕೊಟ್ಟನು. ದುರ್ಯೋಧನನ ಚಾರನಿಗೆ ತಕ್ಕ ಶಿಕ್ಷೆಯೆಂದು, ಒಂದು ದಿನ ಅವನನ್ನು ಕರೆಯಿಸಿ ಅವನೂ ಕೆಲವು ಬೇಡರೂ ಮಲಗಿದ್ದಾಗ ಪಾಂಡವರೇ ಅರಗಿನ ಮನೆಗೆ ಬೆಂಕಿ ಹೊತ್ತಿಸಿ ತಾವು ಗುಪ್ತಮಾರ್ಗದಿಂದ ಪಾರಾದರು. ಪಾಂಡವರೇ ಸತ್ತರೆಂದು ಜನರೆಂದುಕೊಂಡರು. ಸುದ್ದಿಯನ್ನು ಕೇಳಿ ಕೌರವರು ಹಗೆ ನಿಶ್ಶೇಷವಾಯಿತೆಂದು ಉತ್ತರಕ್ರಿಯೆ ಗಳನ್ನು ಮಾಡಿದರು.

ಅತ್ತ ತಪ್ಪಿಸಿಕೊಂಡು ಕಾಡನ್ನು ಸೇರಿದ ಪಾಂಡವರಿಗೆ ಅಲ್ಲಿ ರಾಕ್ಷಸರ ಕಾಟ ಒದಗಿತು. ಹಿಡಿಂಬಿಯು ಭೀಮನನ್ನು ವರಿಸಿ ಅಣ್ಣ ಹಿಡಿಂಬನ ಕೊಲೆಗೇ ಒಪ್ಪಿದುದರಿಂದ ಒಂದು ಕುತ್ತ ಕಳೆಯಿತು. ಮುಂದೆ ಬ್ರಾಹ್ಮಣರ ವೇಷದಲ್ಲಿ ಏಕಚಕ್ರ ವೆಂಬ ಊರಲ್ಲಿರುತ್ತಿದ್ದರು. ಅಲ್ಲಿ ಭೀಮನು ಬಕಾಸುರನನ್ನು ಕೊಂದನು. ದ್ರುಪದನ ಮಗಳಿಗೆ ಸ್ವಯಂವರವೆಂಬ ಸುದ್ದಿ ಅಲ್ಲಿ ತಿಳಿಯಿತು. ದ್ರೋಣನಾಶಕ್ಕಾಗಿ ಧೃಷ್ಟದ್ಯುಮ್ನನೂ

ಕ್ಷತ್ರಿಯಕುಲಕ್ಷಯಕ್ಕಾಗಿ ದ್ರೌಪದಿಯೂ ದ್ರುಪದನ ಅಗ್ನಿ ಕುಂಡದಿಂದಲೇ ಉತ್ಪನ್ನರಾಗಿದ್ದರೆಂಬ ವರ್ತಮಾನವೂ ಕರ್ಣಾಕರ್ಣಿಯಾಗಿ ತಿಳಿಯಿತು. ಪಾಂಡವರೂ ಪಾಂಚಾಲ ನಗರಕ್ಕೆ ಬಂದರು, ಭಿಕ್ಷಾವೃತ್ತಿಯಿಂದಿರುತ್ತಿದ್ದರು.

ಸ್ವಯಂವರದ ದಿನ ಬಂದಿತು. ದ್ರುಪದನು ಕನ್ಯೆಯನ್ನು ಮತ್ಸ್ಯಯಂತ್ರವನ್ನು ಭೇದಿಸಿದವನಿಗೆ ದಾನಮಾಡುವೆನೆಂದು ಸಾರಿದನು. ಕರ್ಣದುರ್ಯೋಧನಾದಿಗಳೂ ಕೃಷ್ಣಬಲ ರಾಮಾದಿಗಳೂ ಸಭೆಗೆ ಬಂದಿದ್ದರು. ಕ್ಷತ್ರಿಯರೆಲ್ಲರೂ ವಿಫಲ ರಾದಮೇಲೆ ಅರ್ಜುನನು ಯಂತ್ರವನ್ನು ಭೇದಿಸಿ ದ್ರೌಪದಿ ಯನ್ನು ಗೆದ್ದನು. ಸೆಣಸುತ್ತಾ ಮೇಲೇರಿ ಬಂದ ಕರ್ಣಾದಿ ಗಳನ್ನು ಸೋಲಿಸಿದನು.

ಕೃಷ್ಣನಿಗೆ ಭೀಮಾರ್ಜುನರ ಗುರುತು ಸಿಕ್ಕಿತು. ಅವನು ಪಾಂಡವರು ಗುಪ್ತವಾಗಿಳಿದಿದ್ದೆಡೆಗೆ ಬಂದು ಸೋದರತ್ತೆ ಕುಂತಿಗೆ ನಮಸ್ಕರಿಸಿ ತಿರುಗಿಹೋದನು. ದ್ರೌಪದಿಯು ಪಾಂಡವರೈವ ರಿಗೂ ಪತ್ನಿಯಾಗಿರಬೇಕೆಂಬ ತೀರ್ಮಾನ ಮಾಡಿಕೊಂಡರು. ಪಾಂಚಾಲರಾಜನಿಗೂ ಇವರು ಪಾಂಡವರೇ ಎಂಬುದು ತಿಳಿದ ಮೇಲೆ ತುಂಬಾ ಆನಂದವಾಯಿತು. ಮದುವೆಯ ಮಹೋ ತ್ಸವಗಳು ಬಹಿರಂಗವಾಗಿ ನಡೆದಮೇಲೆ ಕೃಷ್ಣನು ಬೇಕಾದಂತೆ ಪಾಂಡವರಿಗೆ ಉಡುಗೊರೆಗಳನ್ನು ಕಳುಹಿಸಿದನು.

ದುರ್ಯೋಧನನಿಗೆ ಇದನ್ನು ಸಹಿಸಲಾಗಲಿಲ್ಲ. ಧೃತ ರಾಷ್ಟ್ರನು ಮೇಲಿಂದ ಮೇಲೆ ಸಂತೋಷಗೊಂಡಂತೆ ತೋರಿಸಿ ದರೂ ಒಳಗೆ ಅವನ ಮನಸ್ಸೂ ಪಾಂಡವರ ಕೇಡನ್ನೇ ಬಯಸುತ್ತಿದ್ದಿತು. ದುರ್ಯೋಧನನು ಮೋಸದ ಹಂಚಿಕೆ ಗಳನ್ನೂ, ಕರ್ಣನು ಕೂಡಲೆ ಯುದ್ಧದ ಮಾತನ್ನೂ ತೆಗೆದರು.

ವಿದುರ ಭೀಷ್ಮದ್ರೋಣಾದಿಗಳು ಮಾತ್ರ ಪಾಂಡವರಿಗೂ ರಾಜ್ಯ ದಲ್ಲಿ ಪಾಲನ್ನು ಕೊಡುವುದೇ ಸರಿಯೆಂದರು. ಧೃತರಾಷ್ಟ್ರನು ಭೀಷ್ಮಾದಿಗಳ ಮಾತನ್ನು ನಡೆಸುವವನಂತೆ ಪಾಂಡವರನ್ನು ಮತ್ತೆ ಹಸ್ತಿನಾಪುರಕ್ಕೆ ಕರೆಸಿಕೊಂಡನು. ಅವರಿಗೆ ರಾಜ್ಯದಲ್ಲಿ ಪಾಲೆಂದು ಖಾಂಡವಪ್ರಸ್ಥವೆಂಬ ಗೊಂಡಾರಣ್ಯ ಪ್ರದೇಶವನ್ನು ಕೊಟ್ಟನು. ಅದನ್ನೇ ಅವರು ಸುಂದರ ನಗರವನ್ನಾಗಿ ಮಾಡಿ ಕೊಂಡು ಸುಖವಾಗಿದ್ದರು. ಒಮ್ಮೆ ಅರ್ಜುನನು ಅನಿವಾರ್ಯ ವಾಗಿ ಧರ್ಮರಾಯ ದ್ರೌಪದಿಯೊಡನಿದ್ದಾಗ ಪ್ರವೇಶಿಸ ಬೇಕಾಗಿ ಬಂದು ತಮ್ಮ ನಿಬಂಧನೆಯಂತೆ ಹನ್ನೆರಡುವರ್ಷ ತೀರ್ಥಯಾತ್ರೆ ಮಾಡಬೇಕಾಗಿ ಬಂದಿತು. ಆ ಕಾಲದಲ್ಲೇ ಅವನು ಕೃಷ್ಣನ ರಾಜಧಾನಿಗೆ ಹೋಗಿ ಅಲ್ಲಿ ಕೃಷ್ಣನ ತಂಗಿ ಸುಭದ್ರೆಯನ್ನು ಮದುವೆಯಾದನು. ತಿರುಗಿ ಇಂದ್ರಪ್ರಸ್ಥಕ್ಕೆ ಬಂದು ಸ್ವಲ್ಪಕಾಲ ಸುಖವಾಗಿದ್ದರು. ದ್ರೌಪದಿಗೆ ಐದು ಗಂಡುಮಕ್ಕಳೂ ಸುಭದ್ರೆಗೆ ಅಭಿಮನ್ಯುವೂ ಹುಟ್ಟಿ ಬೆಳೆಯು ತ್ತಿದ್ದರು. ಆಗ ಖಾಂಡವದಹನ ಮಾಡಿದ ಕೃಷ್ಣಾರ್ಜುನರಿಗೆ ಸುದರ್ಶನ ಚಕ್ರ, ಗಾಂಡೀವ ಧನುಸ್ಸು, ಅಕ್ಷಯ ತೂಣೀರಗಳು ಅಗ್ನಿದೇವನಿಂದ ದೊರೆತುವು.

ಇದು ಕೃಷ್ಣನು ಪಾಂಡವರನ್ನು ಕೂಡುವವರೆಗೆ ಮಹಾ ಭಾರತದಲ್ಲಿ ನಡೆಯುವ ಕಥಾಭಾಗ. ಭೀಮನ ಬಾಹು ಬಲವನ್ನೂ, ಯುಧಿಷ್ಠಿರನ ಸಹನೆ ಮತ್ತು ನ್ಯಾಯನಿಷ್ಠೆ ಯನ್ನೂ, ಅರ್ಜುನನ ಧನುರ್ವಿದ್ಯಾಕೌಶಲವನ್ನೂ ಈ ಭಾಗ ತೋರಿಸುವಂತೆಯೇ ಧೃತರಾಷ್ಟ್ರ ದುರ್ಯೋಧನಾದಿಗಳ ಕುತಂತ್ರ, ಮೋಸ, ವಂಚನೆಗಳನ್ನೂ ತೋರಿಸುತ್ತದೆ. ಮುಂದಿನ ಕಥೆಗೆ ಇದು ಬೀಜದಂತೆ. ಈ ವಿಷಬೀಜ ಯಾವ

ಯಾವ ಶಿಖರವನ್ನು ಮುಟ್ಟಿತೆಂಬುದು ಮುಂದಿನ ಕಥೆ. ಇತ್ತ ಪಾಂಚಾಲಿ, ಅತ್ತ ಕೃಷ್ಣ ಈ ಇಬ್ಬರ ಪ್ರವೇಶದಿಂದ ಎಷ್ಟೋ ಅನಿರೀಕ್ಷಿತ ಘಟನೆಗಳು ನಡೆಯುತ್ತವೆ. ಪಾಂಡವರು ಇಂದ್ರ ಪ್ರಸ್ಥದಲ್ಲಿ ಕಳೆದ ಕೆಲವು ವರ್ಷಗಳನ್ನು ಬಿಟ್ಟರೆ ಅವರು ಸುಖವನ್ನೇ ಕಂಡವರಲ್ಲ. ಪಟ್ಟಾಭಿಷಿಕ್ತನಾದ ರಾಜಾಧಿ ರಾಜನ ಮಕ್ಕಳಾದರೂ ಕಾಡಿನಲ್ಲಿ ಹುಟ್ಟಿ, ಮತ್ಸರಿಗಳ ನಡುವೆ, ಅಪಾಯಗಳ ಮಡಲಿನಲ್ಲೇ ವ್ಯಾಸಂಗಮಾಡಿ, ಕಡೆಗೆ ಅಸಹಾಯರಾಗಿ ಊರನ್ನು ಬಿಟ್ಟು, ವಿಧಿಬಲದಿಂದ ಹೇಗೋ ಜೀವವುಳಿಸಿಕೊಂಡು, ಕಾಡು ಮೇಡು ಅಲೆಯುತ್ತಾ, ಊರು ಗಳಲ್ಲಿ ತಲೆಮರೆಸಿಕೊಂಡು ಭಿಕ್ಷಾವೃತ್ತಿಯಿಂದ ಜೀವನವನ್ನು ನಡೆಸಿದರು. ಇಷ್ಟಾದರೂ ದುರ್ಯೋಧನಾದಿಗಳನ್ನು ಕೊಲ್ಲ ಬೇಕೆಂಬ ಕುಹಕಬುದ್ಧಿ ಅವರಲ್ಲಿ ಒಮ್ಮೆಯಾದರೂ ಸುಳಿ ಯುವುದಿಲ್ಲ. ಪಾಂಚಾಲಿಯ ಪರಿಣಯದಿಂದ, ಕೃಷ್ಣನ ಸಮಾಗಮದಿಂದ ಅವರ ಅದೃಷ್ಟ ಕುದುರಿತು. ಕಾಡೂ ನಂದನವಾಯಿತು. ಸ್ವಲ್ಪ ಕಾಲ ಸುಖವಾಗಿದ್ದರು. ಆ ಸುಖ ಹಿಂದೆ ಇರಲಿಲ್ಲ; ಮುಂದೂ ಉಳಿಯಲಿಲ್ಲ. ವಿಧಿವಿಲಾಸ!

## ಸಭಾಪರ್ವ

ಸಭಾಪರ್ವದಿಂದ ಮುಂದಿನ ಕಥೆಯಲ್ಲೆಲ್ಲ ಮುಖ್ಯವಾಗಿ ಕೃಷ್ಣನ ಕೈವಾಡವಿಲ್ಲದ ಘಟನೆಯಿಲ್ಲ; ಪಾಂಡವರ ಕೈಯಿಂದ ಎಲ್ಲವನ್ನೂ ಹಿಂದೆ ನಿಂತೇ ಮಾಡಿಸುವ ಮಹಾತ್ಮ ಅವನು. ಇಲ್ಲಿಂದ ಮುಂದಿನ ಕಥೆಯನ್ನೆಲ್ಲ ಕೃಷ್ಣನ ಪಾತ್ರಚಿತ್ರ ವೆಂದರೂ ಸಲ್ಲುತ್ತದೆ:—

ಯುಧಿಷ್ಠಿರನು ರಾಜಸೂಯಯಾಗ ಮಾಡಬೇಕೆಂಬ ಸಲಹೆ ಬರುವುದು ಕೃಷ್ಣನಿಂದ. 'ಉಳಿದವರು ಕಾಮಕ್ರೋಧಗಳಿಂದ ಹೇಳಬಹುದು; ನಿನ್ನಲ್ಲಿ ಆ ಸಂದೇಹವಿಲ್ಲ'ವೆಂದು ಯುಧಿಷ್ಠಿರನೇ ಹೇಳುತ್ತಾನೆ. 'ಕ್ಷತ್ರಿಯರನ್ನೆಲ್ಲ ಗೆದ್ದು ಸೆರೆಯಲ್ಲಿಟ್ಟಿರುವ ಜರಾಸಂಧನೊಬ್ಬನನ್ನು ಗೆದ್ದರೆ ನೀನು ಎಲ್ಲರನ್ನೂ ಗೆದ್ದಂತಾಗುತ್ತದೆ; ಯಾಗಮಾಡಿ ಎಲ್ಲರಿಂದಲೂ ಗೌರವವನ್ನೂ ಪ್ರೀತಿಯನ್ನೂ ಗಳಿಸಬಹುದು. ಅವನ ಭಯದಿಂದ ನಾನೇ ಮಧುರೆಯನ್ನು ಬಿಟ್ಟು ದ್ವಾರಕೆಯಲ್ಲಿರಬೇಕಾಗಿದೆ. ಅವನ ವಧೆಗೆ ಅನುಜ್ಞೆಯನ್ನು ಕೊಡು' ಎಂಬುದು ಕೃಷ್ಣನ ಸೂಚನೆ. ನಿನ್ನ ಮಾತಿಗೆ ಪ್ರತಿಯಿಲ್ಲವೆಂದು ಯುಧಿಷ್ಠಿರನು ಕೃಷ್ಣನ ಜತೆಯಲ್ಲಿ ಭೀಮಾರ್ಜುನರನ್ನು ಕಳಿಸಿಕೊಡುತ್ತಾನೆ. ಭೀಮಾರ್ಜುನರೇ ಅವನ ಕಣ್ಣುಗಳು; ಆದರೆ ಕೃಷ್ಣ ಇನ್ನೂ ಸ್ವಲ್ಪ ಹೆಚ್ಚು, ಮನಸ್ಸೇ ಅವನು:—

'ಭೀಮಾರ್ಜುನಾವುಭೌ ನೇತ್ರೇ ಮನೋ ಮನ್ಯೇ ಜನಾರ್ದನಮ್'
(II 16. 2)

ಕೃಷ್ಣನ ನೀತಿಬಲ, ಭೀಮನ ಬಾಹುಬಲ, ಎರಡೂ ಅರ್ಜುನನ ರಕ್ಷಣೆಯಲ್ಲಿದ್ದಾಗ ವಿಜಯ ಸಿಕ್ಕಲೇ ಬೇಕು. ನೇರವಾಗಿ ದಂಡೆತ್ತಿ ಹೋಗದೆ, ವೇಷಾಂತರದಲ್ಲಿ ಹೋಗಿ ಉಪಾಯದಿಂದ ಜರಾಸಂಧನನ್ನು ಕೊಂದು ಅವನು ಸೆರೆಯಲ್ಲಿಟ್ಟಿದ್ದ ರಾಜರನ್ನು ಬಿಡಿಸಿ ಬರುತ್ತಾರೆ. ಎಲ್ಲವೂ ನಿರೀಕ್ಷೆಯಂತೆ ನಡೆದು ರಾಜಸೂಯಯಾಗ ಆರಂಭವಾದಾಗ ಕೃಷ್ಣನಿಗೆ ಅಗ್ರಪೂಜೆಯನ್ನು ಕೊಡಲು ಪಾಂಡವರು ಹೊರಟುದು ಸಹಜವಾಗಿಯೇ ಇದೆ. ಸಭೆಯಲ್ಲಿ ಭೀಷ್ಮನೇ ಕೃಷ್ಣನ ಮಹತ್ತ್ವವನ್ನು ಮುಕ್ತಕಂಠದಿಂದ ಹೊಗಳುತ್ತಾನೆ:—

ಏಷ ಹ್ಯೇಷಾಂ ಸಮಸ್ತಾನಾಂ ತೇಜೋಬಲಪರಾಕ್ರಮೈಃ |
ಮಧ್ಯೇ ತಪನ್ನಿವಾಭಾತಿ ಜ್ಯೋತಿಷಾಮಿವ ಭಾಸ್ಕರಃ ||
ಅಸೂರ್ಯಮಿವ ಸೂರ್ಯೇಣ ನಿರ್ವಾತಮಿವ ವಾಯುನಾ |
ಭಾಸಿತಂ ಹ್ಲಾದಿತಂ ಚೈವ ಕೃಷ್ಣೇನೇದಂ ಸದೋ ಹಿ ನಃ ||

'ಗ್ರಹಗಳ ನಡುವೆ ಸೂರ್ಯನಂತೆ ಕೃಷ್ಣನು ರಾಜಸಭೆಯಲ್ಲಿ ಹೊಳೆಯುತ್ತಿದ್ದಾನೆ. ಕತ್ತಲೆಯಲ್ಲಿ ಸೂರ್ಯ ಬಂದಂತೆ, ಗಾಳಿಯಿಲ್ಲದೆಡೆ ಗಾಳಿ ಸುಳಿದಂತೆ, ನಮ್ಮ ಸಭೆ ಬೆಳಕಾಗಿದೆ; ಚೈತನ್ಯಮಯವಾಗಿದೆ.' ಇದನ್ನು ಸಹಿಸದ ಶಿಶುಪಾಲನ ತಲೆ ಕೃಷ್ಣಚಕ್ರಕ್ಕೆ ಆಹುತಿಯಾಗುತ್ತದೆ. ಯಾಗ ಮುಗಿದ ಮೇಲೆ ಕೃಷ್ಣ ದ್ವಾರಕಿಗೆ ತೆರಳುತ್ತಾನೆ.

ಕೃಷ್ಣನು ಮರೆಯಾದೊಡನೆ ಯುಧಿಷ್ಠಿರನ ವಿವೇಕವೂ ಮಾಯವಾಗುತ್ತದೆ. ಶತ್ರುಗಳ ಕಪಟಕ್ಕೆ ಸುಲಭವಾಗಿ ಬಲಿಬಿದ್ದನು. ದುರ್ಯೋಧನನಿಗೆ ಯುಧಿಷ್ಠಿರನ ರಾಜಸೂಯದ ವೈಭವವನ್ನು ನೋಡಿ ಸಹಿಸಲಾಗಲಿಲ್ಲ. ಮೈಯೆಲ್ಲಾ ಕುದಿದು ಹೋಯಿತು. ಅವರ ಅಷ್ಟೈಶ್ವರ್ಯವನ್ನೂ ತಾನೇ ಅಪಹರಿಸ ಬೇಕೆಂಬ ದುರ್ಬುದ್ಧಿ ಬೆಳೆಯಿತು. ಯುದ್ಧದಲ್ಲೀಗ ಅವರು ಅಜೇಯರಾಗಿದ್ದುದು—ಪಾಂಚಾಲರ ಮತ್ತು ಅಂಧಕವೃಷ್ಣಿಗಳ ಬಾಂಧವ್ಯದಿಂದ—ಅವನಿಗೆ ಚೆನ್ನಾಗಿ ಗೊತ್ತು. ಆದುದರಿಂದ ಮೋಸದಿಂದ ಜೂಜಾಡಿಸಿ ಅವರ ಸರ್ವಸ್ವವನ್ನೂ ಅಪಹರಿಸ ಬಹುದೆಂಬ ಶಕುನಿಯ ಸಲಹೆ ಅವನಿಗೆ ಪಥ್ಯವಾಯಿತು. ಒಪ್ಪ ದಿದ್ದರೆ ಪ್ರಾಣಬಿಡುವೆನೆಂದು ಹಟತೊಟ್ಟು ಧೃತರಾಷ್ಟ್ರನನ್ನೂ ಪಾಂಡವರಿಂದ ಜೂಜಾಡಿಸಲು ಒಪ್ಪಿಸಿದರು. ಪಾಂಡವರನ್ನು ಹಸ್ತಿನಾಪುರದ ದ್ಯೂತಸಭೆಗೆ ಕರೆಯಿಸಿದರು. ಕರೆದರೆ ಒಲ್ಲೆನೆನ್ನುವುದಿಲ್ಲವೆಂಬ ಯುಧಿಷ್ಠಿರನು ಸರ್ವಸ್ವವನ್ನೂ

ಜೂಜಿನಲ್ಲಿ ಶಕುನಿಯೊಡನೆ ಪಣವೊಡ್ಡಿ ಸೋತಾಯಿತು. ತನ್ನ ತಮ್ಮಂದಿರನ್ನೂ, ಆಮೇಲೆ ತನ್ನನ್ನೂ ಸೋತಾಯಿತು. ಶಕುನಿಯ ಸಲಹೆಯಂತೆ ಕಡೆಗೆ ದ್ರೌಪದಿಯನ್ನೂ ಪಣವೊಡ್ಡಿ ಸೋತಾಯಿತು. ಧೃತರಾಷ್ಟ್ರನು ಎಲ್ಲವನ್ನೂ ಸಂತೋಷದಿಂದ ನೋಡುತ್ತಿದ್ದನು. ಜೂಜನ್ನು ನಿಲ್ಲಿಸೆಂಬ ವಿದುರನ ಮಾತಿಗೆ ಅವನು ಕಿವಿಗೊಡಲಿಲ್ಲ. ಪಾಂಡವರ ನಿರ್ಗತಿಕತೆಯನ್ನೂ ತಮ್ಮ ಸರ್ವಾಧಿಕಾರವನ್ನೂ ಪ್ರದರ್ಶಿಸಲು ಅವರುಟ್ಟ ಬಟ್ಟೆಗಳನ್ನೂ ಬಿಚ್ಚಿಸಿದರು. ತುಂಬಿದ ರಾಜಸಭೆಗೆ ಪಾಂಡವರ ರಾಣಿಯಾದ ದ್ರೌಪದಿಯನ್ನೇ ಕರ್ಣ ದುರ್ಯೋಧನರು ತರಿಸಿ ಭಂಗಿಸಿದರು. ದುಶ್ಯಾಸನನೇ ಅವಳನ್ನು ಕೂದಲನ್ನೆಳೆದುಕೊಂಡು ಸಭೆಗೆ ತಂದವನು. ಧರ್ಮಕ್ಕೆ ಕಟ್ಟುಬಿದ್ದ ಪಾಂಡವರು ಏನೂ ಮಾಡಲಾರದೆ ಕೋಪವನ್ನು ನುಂಗಿಕೊಂಡು ಕುಳಿತಿರಬೇಕಾಯಿತು. ದ್ರೌಪದಿಯನ್ನು ಜಯಾಂಧನಾದ ದುರ್ಯೋಧನನು ಹೀನಾಯವಾಗಿ ಕೆಣಕಿ ನುಡಿದುದು ಭೀಮನಿಗೆ ಸಹಿಸಲಿಲ್ಲ. ಅವನ ತೊಡೆಗಳನ್ನು ಮುರಿಯುವ ಭೀಕರ ಪ್ರತಿಜ್ಞೆಯನ್ನೇ ಮಾಡಿದನು. ಧೃತರಾಷ್ಟ್ರನಿಗೆ ಆಗ ತನ್ನ ಮಗನ ಅನ್ಯಾಯದ ಅರಿವಾಯಿತು. ದ್ರೌಪದಿಯನ್ನು ಸಮಾಧಾನಮಾಡಿ ಪಾಂಡವರ ಸ್ವಾತಂತ್ರ್ಯವನ್ನೂ ಸರ್ವಸ್ವವನ್ನೂ ತಿರುಗಿ ಕೊಡಿಸಿ ಅವರನ್ನು ಕಳುಹಿಸಿಕೊಟ್ಟನು. ಆದರೆ ನಿರಾಶನಾದ ದುರ್ಯೋಧನನು ತಂದೆಯನ್ನು ಒಪ್ಪಿಸಿ ಪಾಂಡವರಿಗೆ ವನವಾಸ ಮಾಡಿಸಲು ಅರ್ಧ ದಾರಿಯಿಂದಲೇ ಅವರನ್ನು ಕರೆಸಿ ಮತ್ತೆ ಜೂಜಾಡಿಸಿದನು. ಯುಧಿಷ್ಠಿರನು ಸೋತನು. ಹನ್ನೆರಡು ವರ್ಷ ವನವಾಸ, ಆಮೇಲೆ ಒಂದು ವರ್ಷ ಅಜ್ಞಾತವಾಸ, ಅಜ್ಞಾತವಾಸ

ಕಾಲದಲ್ಲಿ ಗುರುತು ಸಿಕ್ಕಿದರೆ ಮತ್ತೆ ಹನ್ನೆರಡು ವರ್ಷ ವನವಾಸ—ಈ ದುರ್ಗತಿ ಮತ್ತೆ ಪಾಂಡವರಿಗೆ ಪ್ರಾಪ್ತವಾಯಿತು. ಕಾಡಿಗೆಲ್ಲರೂ ಹೊರಟು ನಿಂತಾಗ ದುಶ್ಶಾಸನನು ದ್ರೌಪದಿಯನ್ನೂ ಭೀಮಾದಿಗಳನ್ನೂ ಚುಚ್ಚಿ ಚುಚ್ಚಿ ಹಾಸ್ಯಮಾಡಿದನು. ರೋಷಾವೇಶದಲ್ಲಿ ಭೀಮನು ಅವನ ರಕ್ತಪಾನದ ಕ್ರೂರ ಪ್ರತಿಜ್ಞೆಮಾಡಿದನು. ಕುಂತಿಯು ವಿದುರನ ಮನೆಯಲ್ಲಿದ್ದಳು. ಪಾಂಡವರು ಪತ್ನೀಸುತರೊಡನೆ ಕಾಡಿಗೆ ಹೊರಟರು. ವಿದುರನ ಹಿತನುಡಿಗಳು ಧೃತರಾಷ್ಟ್ರನ ಕಿವಿಗೆ ಬೀಳಲಿಲ್ಲ.

## ಅರಣ್ಯಪರ್ವ

ಈ ವಿಚಾರಗಳು ತಿಳಿದೊಡನೆ ಕೃಷ್ಣನೂ ಪಾಂಚಾಲರೂ ಪಾಂಡವರನ್ನು ನೋಡಲು ಕಾಡಿಗೆ ಓಡಿಬಂದರು. ಕೃಷ್ಣನು ದುರ್ಯೋಧನ, ಕರ್ಣ, ಶಕುನಿ, ದುಶ್ಶಾಸನರ ವಧೆ ಸಿದ್ಧವೆಂದು ದ್ರೌಪದಿಯನ್ನು ಸಂತೈಸುತ್ತಾನೆ. ತಾನು ದ್ವಾರಕಿಯಲ್ಲೇ ಇದ್ದರೂ ಓಡಿ ಬಂದು ಜೂಜನ್ನು ತಪ್ಪಿಸುತ್ತಿದ್ದೆನೆನ್ನುತ್ತಾನೆ. ಹೇಗೂ ಕಾಲಮಿಂಚಿ ಹೋಗಿತ್ತು. ಸುಭದ್ರೆ, ಅಭಿಮನ್ಯುವನ್ನು ಕರೆದುಕೊಂಡು ಹೋಗುತ್ತಾನೆ. ಯುದ್ಧದಲ್ಲಿ ವಿಜಯಸಿದ್ಧಿಗಾಗಿ ಅರ್ಜುನನು ಶಿವನನ್ನಾರಾಧಿಸಿ ಪಾಶುಪತಾಸ್ತ್ರವೇ ಮೊದಲಾದ ದಿವ್ಯಾಸ್ತ್ರಗಳನ್ನು ಪಡೆದುಕೊಂಡು ಬರುತ್ತಾನೆ. ಹಿಂದಿನ ರಾಜರ ಉಪಾಖ್ಯಾನಗಳನ್ನು ಕೇಳುತ್ತ ಪಾಂಡವರು ಕಾಲ ತಳ್ಳುವರು. ಭೀಮನು ಜಟಾಸುರನನ್ನು ಸಂಹರಿಸುತ್ತಾನೆ. ಈ ಕಾಲದಲ್ಲೇ ದ್ರೌಪದಿಯನ್ನು ಜಯದ್ರಥನು ಹೊತ್ತುಕೊಂಡು ಹೋಗಿ ಪಾಂಡವರಿಂದ ಪರಾಭವವನ್ನು ಪಡೆದು ಅವಮಾನಿತನಾಗುತ್ತಾನೆ. ಅತ್ತ ದುರ್ಯೋ

ಧನನು ಪಾಂಡವರನ್ನು ಮೀರಿಸಬೇಕೆಂದು ವೈಭವದ ಯಾಗ ಮಾಡುತ್ತಾನೆ. ಹನ್ನೆರಡು ವರ್ಷಗಳು ಕಳೆಯುತ್ತವೆ.

## ವಿರಾಟಪರ್ವ

ಅಜ್ಞಾತವಾಸಕ್ಕಾಗಿ ಪಾಂಡವರು ವಿರಾಟನ ಅರಮನೆಯಲ್ಲಿ ವೃತ್ತಿಗಳನ್ನು ಹಿಡಿದರು. ದ್ರೌಪದಿಯನ್ನು ಕೆಣಕಿದ ಕೀಚಕನು ಭೀಮನಿಂದ ಹತನಾದನು. ಈ ಸುಳಿವನ್ನರಿತ ಕೌರವರು ಪಾಂಡವರ ಅಜ್ಞಾತತ್ವವನ್ನು ಮುರಿಯಲು ಒಂದು ಉಪಾಯ ಮಾಡಿದರು. ವಿರಾಟನ ಗೋವುಗಳನ್ನು ದಕ್ಷಿಣದಿಂದ ನೆರೆಯ ರಾಜನಾದ ಸುಶರ್ಮನು ಹಿಡಿಯುವುದೆಂದೂ, ಆಗಲೇ ತಾವು ಉತ್ತರದಿಂದ ಬಂದು ಗೋವುಗಳನ್ನು ಹಿಡಿಯುವುದೆಂದೂ ನಿಶ್ಚಯಿಸಿದರು. ಬಿಡಿಸಿಕೊಳ್ಳಲು ಪಾಂಡವರು ಬಂದೇ ತೀರುವ ರೆಂಬ ನಂಬಿಕೆ ಕೌರವರಿಗಿತ್ತು. ಇಷ್ಟುಹೊತ್ತಿಗೆ ಅಜ್ಞಾತ ವಾಸದ ಗಡುವು ಸರಿಯಾಗಿ ಮುಗಿದಿದ್ದುದರಿಂದ ಅರ್ಜುನನು ಉತ್ತರನ ಸಾರಥ್ಯದಲ್ಲಿ ಕುರುಸೇನೆಯನ್ನೆಲ್ಲ ಭಂಗಿಸಿ ವಿಜಯಿ ಯಾಗಿ ಹಿಂತಿರುಗಿದನು. ಕೃತಜ್ಞನಾದ ವಿರಾಟನು ಅಭಿ ಮನ್ಯುವಿಗೆ ಉತ್ತರೆಯನ್ನು ಕೊಟ್ಟು ವಿವಾಹಮಾಡಿದನು. ಈ ವಿವಾಹ ಕಾಲದಲ್ಲಿ ಕೃಷ್ಣ ಬಂದು ಮತ್ತೆ ಪಾಂಡವರಿಗೆ ಉಚಿತ ಸಲಹೆಯನ್ನೀಯುವನು.

## ಉದ್ಯೋಗಪರ್ವ

ಪಾಂಡವರು ತಮ್ಮ ರಾಜ್ಯಪ್ರಾಪ್ತಿಗಾಗಿ ಕೌರವರಲ್ಲಿಗೆ ಚಾರ ರನ್ನಟ್ಟುವರು. ಸಂದೇಶ–ಪ್ರತಿಸಂದೇಶಗಳೆಷ್ಟಾದರೂ ರಾಜ್ಯ ವನ್ನು ಬಿಟ್ಟುಕೊಡಲು ಮೊದಲು ದುರ್ಯೋಧನನೊಪ್ಪು ವುದಿಲ್ಲ. ಅಜ್ಞಾತವಾಸದ ಗಡುವೇ ತೀರಲಿಲ್ಲವೆಂದು ವಾಯಿ

ಬಡಿಯಲಾರಂಭಿಸುತ್ತಾನೆ. ಎರಡು ಕಡೆಯೂ ಯುದ್ಧ ಸಿದ್ಧತೆಗಳು, ಸೈನ್ಯಸಂಗ್ರಹಗಳು ನಡೆಯುತ್ತವೆ. ಕೃಷ್ಣನ ಸೈನ್ಯವೆಲ್ಲ ದುರ್ಯೋಧನನ ಕಡೆಗೂ ಕೃಷ್ಣನೊಬ್ಬನು ಮಾತ್ರ ಯುದ್ಧ ಮಾಡದೆ ಅರ್ಜುನನ ಸಾರಥಿಯಾಗಿರುವುದೆಂದೂ ತೀರ್ಮಾನವಾಗುತ್ತದೆ. ಕೃಷ್ಣನೇ ದೌತ್ಯವನ್ನು ವಹಿಸಿಕೊಂಡು ಶಾಂತಿ ಪ್ರಯತ್ನ ಮಾಡಬೇಕಾಗುತ್ತದೆ. ಕ್ಷತ್ರಿಯರ ಕುಲಕ್ಷಯ ತಪ್ಪಲೆಂದು ಕೃಷ್ಣನು ಪಟ್ಟ ಶ್ರಮವೆಲ್ಲವೂ ವ್ಯರ್ಥವಾಗುತ್ತದೆ. ನಯ, ಭಯ, ಧರ್ಮ—ಯಾವುದಕ್ಕೂ ದುರ್ಯೋಧನ ಒಪ್ಪುವುದಿಲ್ಲ. ರಣರಂಗದಲ್ಲಿ ವೀರರಂತೆ ಕಾದಿ ಮಡಿಯುವೆವೇ ಹೊರತು ಸೂಜಿ ಮೊನೆಯಷ್ಟು ಭೂಮಿಯನ್ನೂ ಕೊಡುವುದಿಲ್ಲವೆನ್ನುತ್ತಾನೆ. ಭೀಷ್ಮಾದಿಗಳು ಯುದ್ಧವನ್ನು ತಪ್ಪಿಸಲು ಮಾಡುವ ಯತ್ನಗಳೆಲ್ಲ ವಿಫಲವಾಗುತ್ತವೆ. ಕೃಷ್ಣನನ್ನೇ ಕಟ್ಟಿ ಹಾಕಲು ದುರ್ಯೋಧನ ಪ್ರಯತ್ನಿಸುತ್ತಾನೆ. ಯುದ್ಧ ಅನಿವಾರ್ಯವಾಗುತ್ತದೆ.

## ಭೀಷ್ಮಾದಿ ಯುದ್ಧಪರ್ವಗಳು

ಪಾಂಡವರ ಕಡೆ ಏಳು ಅಕ್ಷೋಹಿಣೀ ಸೈನ್ಯವೂ ಕೌರವರ ಕಡೆ ಹನ್ನೊಂದು ಅಕ್ಷೋಹಿಣಿ ಸೈನ್ಯವೂ ಕುರುಕ್ಷೇತ್ರದಲ್ಲಿ ಸಂಗ್ರಹವಾಗುತ್ತದೆ. ಭೀಷ್ಮನೇ ಮೊದಲನೆಯ ಕೌರವ ಸೇನಾಪತಿಯಾಗಿ ಬರುತ್ತಾನೆ. ಪಾಂಡವರಲ್ಲೆಲ್ಲ ಯುದ್ಧವೀರನೆಂದರೆ ಅರ್ಜುನ; ದಿವ್ಯಾಸ್ತ್ರ ಸಂಪನ್ನನಾದ ಈತನಿಗೆ ಕೂಡ ಸ್ವಜನರೊಡನೆ ಯುದ್ಧಪ್ರಸಂಗ ಬಂದಾಗ ಮನಸ್ಸು ಹಿಂದಾಗುತ್ತದೆ. ಕೃಷ್ಣನು ಭಗವದ್ಗೀತೆಯನ್ನು ಯುದ್ಧಾರಂಭದಲ್ಲಿ ಉಪದೇಶಿಸಿ ಅವನನ್ನು ಯುದ್ಧೋನ್ಮುಖನಾಗುವಂತೆ ಮಾಡುತ್ತಾನೆ.

ಎರಡು ಕಡೆಯೂ ಅತಿರಥ ಮಹಾರಥರು, ಶಸ್ತ್ರಾಸ್ತ್ರಕೌಶಲ ವುಳ್ಳವರು; ಕವಿಯ ಯುದ್ಧವರ್ಣನೆ ರೋಮಾಂಚಕಾರಕ ವಾಗಿದೆ. ಕೇವಲ ಶಕ್ತಿಯಿಂದ ಭೀಷ್ಮ, ದ್ರೋಣ, ಕರ್ಣ, ಮುಂತಾದವರನ್ನು ಜಯಿಸುವಂತಿರಲಿಲ್ಲ. ಕಡೆಗೆ ಶಿಖಂಡಿ ಯನ್ನು ಮುಂದಿಟ್ಟುಕೊಂಡು ಭೀಷ್ಮನನ್ನು ಅರ್ಜುನನು ಕೆಡವು ತ್ತಾನೆ; 'ಅಶ್ವತ್ಥಾಮಾ ಹತಃ (ಕುಂಜರಃ)' ಎಂದು ಸತ್ಯವಾದಿ ಯಾದ ಯುಧಿಷ್ಠಿರನ ಬಾಯಿಂದಲೂ ಅಸತ್ಯವನ್ನಾಡಿಸಿ ನಿಶ್ಶಸ್ತ್ರನಾದ ದ್ರೋಣನನ್ನು ವಧಿಸುತ್ತಾರೆ. ಕರ್ಣನು ರಥದ ಗಾಲಿಯನ್ನು ಸರಿಮಾಡುತ್ತಿದ್ದಾಗ ಅರ್ಜುನನ ಬಾಣಕ್ಕೆ ತುತ್ತಾಗುತ್ತಾನೆ. ದುರ್ಯೋಧನನು ಕೊಳದಲ್ಲಿ ಅಡಗಿ ಕೊಂಡರೆ ಅಲ್ಲಿಗೂ ಬಿಡದೆ ಗದಾಯುದ್ಧದಲ್ಲಿ ಹೊಕ್ಕುಳ ಕೆಳಗೆ ಹೊಡೆದು ಭೀಮನು ಅವನ ತೊಡೆ ಮುರಿಯುತ್ತಾನೆ; ದುಶ್ಶಾಸನನ ರಕ್ತಪಾನವನ್ನೂ ಮಾಡುತ್ತಾನೆ. ಅತ್ತ ಕಡೆಯೂ ಹೀಗೆಯೇ; ಅಭಿಮನ್ಯುವನ್ನು ಅಧರ್ಮದಿಂದಲೇ ಕೊಲ್ಲುತ್ತಾರೆ. ಅಶ್ವತ್ಥಾಮನು ರಾತ್ರಿ ಪಾಳಯಕ್ಕೆ ನುಗ್ಗಿ ಮಲಗಿ ನಿದ್ರಿಸುತ್ತಿದ್ದ ವರನ್ನೆಲ್ಲಾ ಕೊಂದು ಹೋಗುತ್ತಾನೆ. ದ್ರೌಪದಿಯ ಮಕ್ಕಳೊ ಬ್ಬರೂ ಉಳಿಯುವುದಿಲ್ಲ. ಪ್ರತಿ ಹೆಜ್ಜೆಯಲ್ಲಿಯೂ ಭೀಷ್ಮ, ಭಗದತ್ತ, ಕರ್ಣ, ಅಶ್ವತ್ಥಾಮ ಮುಂತಾದ ಬಲಾಢ್ಯರಿಂದ ಪಾಂಡವರನ್ನು ಸಂರಕ್ಷಿಸಿಕೊಂಡವನು ಕೃಷ್ಣ. ಅಪ್ರತಿಹತ ದಿವ್ಯಾಸ್ತ್ರಗಳಿಗೆ ತನ್ನ ಮೈಯನ್ನೊಡ್ಡಿಯೂ ಕಾಪಾಡಿಕೊಳ್ಳು ತ್ತಾನೆ. ಎರಡು ಕಡೆಯೂ ಅಪಾರ ಕ್ಷಯವಾಗಿ ಕುರು ವಂಶದ ಕುಡಿಯೂ ಇಲ್ಲದಂತಾಗುತ್ತದೆ. ಕೃಷ್ಣನ ತಪೋ ಬಲದಿಂದ ಉತ್ತರೆಯ ಗರ್ಭ ಮಾತ್ರ ಉಳಿಯುತ್ತದೆ. ಸ್ತ್ರೀಯ ರೆಲ್ಲರೂ ರಣಾಂಗಣದಲ್ಲಿ ಬಂದು ಗೋಳಾಡುತ್ತಾರೆ.

## ಶಾಂತಿಪರ್ವ

ಯುದ್ಧಾನಂತರ ಶರಶಯ್ಯೆಯಲ್ಲಿದ್ದ ಭೀಷ್ಮನು ವಿರಕ್ತನಾಗಿ ಬಂದ ಯುಧಿಷ್ಠಿರನಿಗೆ ಧರ್ಮಬೋಧೆ ಮಾಡಿ ದೇಹವನ್ನು ಬಿಡುತ್ತಾನೆ.

## ಉಳಿದ ಪರ್ವಗಳು

ಹದಿನೈದು ವರ್ಷ ಮಾತ್ರ ರಾಜ್ಯದಲ್ಲಿ ಹೇಗೋ ದುಃಖ ದಿಂದ ಇದ್ದು, ಅಶ್ವಮೇಧಯಾಗ ಮಾಡಿದ ಮೇಲೆ ಪರೀಕ್ಷಿತ್ತಿಗೆ ಪಟ್ಟ ಕಟ್ಟಿ ಪಾಂಡವರು ಮಹಾಪ್ರಸ್ಥಾನಕ್ಕೆ ತೆರಳುತ್ತಾರೆ. ಇದಕ್ಕೆ ಸ್ವಲ್ಪ ಮೊದಲೇ ಯಾದವರ ಅಂತಃಕಲಹದಿಂದ ಅವರ ವಂಶವೂ ನಿಶ್ಶೇಷವಾಗುತ್ತದೆ. ಕೃಷ್ಣನೂ ಸಾವಿಗೀಡಾಗುತ್ತಾನೆ. ಕೌರವ ಪಾಂಡವಾದಿಗಳು ಸ್ವರ್ಗಾರೋಹಣಪರ್ವದಲ್ಲಿ ದೇವ ತಾಂಶಗಳಲ್ಲಿ ಐಕ್ಯವಾಗುತ್ತಾರೆ. ಭಾರತಕಥೆ ಮುಗಿಯುತ್ತದೆ.

ಇಷ್ಟು ಸಂಗ್ರಹವಾಗಿ ಹೇಳಿದರೂ ಕಥೆಯಲ್ಲಿ ಮೊದಲಿನಿಂದ ಕಡೆಯವರೆಗೆ ಕವಿಗೆ ಒಂದೇ ಗುರಿಯಿರುವುದನ್ನು ಇಲ್ಲವೆನ್ನು ವಂತಿಲ್ಲ. ರಾಜ್ಯದ ದುರಾಸೆಯಿಂದ, ದುರ್ಯೋಧನಾದಿಗಳು ಮಾಡಬಾರದ್ದನ್ನೆಲ್ಲ ಮಾಡಿದರು; ಎಂತೆಂತಹ ವೀರಾಧಿವೀರರು ಅವರ ಕಡೆಗೆ ನಿಂತು ಹೋರಾಡಿದರೂ ಮಣ್ಣುಪಾಲಾದರು. ಇತ್ತ ಪಾಂಡವರು ಹುಟ್ಟಿದುದು ಕಷ್ಟದಲ್ಲಿ; ಬೆಳೆದುದು ಕಷ್ಟ ದಲ್ಲಿ; ರಾಜಪುತ್ರರಾದರೂ ಅವರ ಆಯುಷ್ಯದ ಹೆಚ್ಚು ಕಾಲ ಕಾಡಿನಲ್ಲೇ ಕಳೆಯಿತು. ಅವರು ಕಡೆಗೆ ಯುದ್ಧದಲ್ಲಿ ಗೆದ್ದರು. ಸುಖ ಬಂದಿತೆ? ಮಕ್ಕಳು ಮರಿಗಳೊಬ್ಬರೂ ಇಲ್ಲದ ರಾಜ್ಯ ಅವರಿಗೆ ವನವಾಸಕ್ಕಿಂತ ಕಷ್ಟತರವಾಗಿ ಕಂಡಿರಬೇಕು.

ಅಧರ್ಮಕ್ಕೂ ಧರ್ಮಕ್ಕೂ ಎಲ್ಲಕ್ಕೂ ಮರಣದಲ್ಲೇ ನಿಲುಗಡೆ ಯಾದರೆ ಧರ್ಮವನ್ನೇಕೆ ಆಚರಿಸಬೇಕು? ಎಂಬ ಮೂಲ ಪ್ರಶ್ನೆಯೇಳುತ್ತದೆ. ಈ ಮೂಲಪ್ರಶ್ನೆಯನ್ನು ಬಿಡಿಸುವುದು ಮಹಾಭಾರತದ ಮೊದಲ ಗುರಿ. ಅದಕ್ಕಾಗಿಯೇ ಭಗವದ್ಗೀತೆ, ಅದಕ್ಕಾಗಿಯೇ ರಾಜಧರ್ಮ, ಆಪದ್ಧರ್ಮ, ಮೋಕ್ಷಧರ್ಮಗಳು ಅಲ್ಲಿ ಬರುವುದು. ಕೃಷ್ಣನ ನಿಷ್ಕಾಮಕರ್ಮದ ತತ್ತ್ವವೂ ಆಚರಣೆಯೂ ಮಹಾಭಾರತದ ಮಧ್ಯವರ್ತಿಯಾಗಿ ನಿಲ್ಲುವುದು! ಅರ್ಥಕಾಮಗಳಿಗಾಗಿ ಮಾತ್ರವೇ ಧರ್ಮಾಚರಣೆಯಲ್ಲ; ಮೋಕ್ಷಪ್ರಾಪ್ತಿಗಾಗಿಯೂ ಧರ್ಮ ಅಗತ್ಯ. ದುರ್ಯೋಧನ ನಂತಹ ಧರ್ಮಬಾಹಿರರಿಗೂ ಅಂತ್ಯಕಾಲದಲ್ಲಿ ಧರ್ಮದ ಅಗತ್ಯ ಕಾಣುತ್ತದೆ. ಕರ್ಣ, ದ್ರೋಣಾದಿಗಳ ವಧೆ ಅಧರ್ಮ ವೆಂಬ ಮಾತನ್ನು ದುರ್ಯೋಧನಾದಿಗಳೇ ಹೇಳುತ್ತಾರೆ. ಅನುಕೂಲಸಿಂಧುವಾದ ಈ ಧರ್ಮ ಧರ್ಮವಲ್ಲ. ತನಗೊಂದು ಧರ್ಮ; ಇನ್ನೊಬ್ಬನಿಗೆ ಇನ್ನೊಂದು ಧರ್ಮವೆಂಬುದು ಧರ್ಮಲಕ್ಷಣವಲ್ಲ. ಸದಾ ಒಂದೇ ರೂಪದಿಂದ ಯಾವುದು ಉಳಿದು ಸಮಾಜವನ್ನು ಮುಂದಕ್ಕೆ ತರುವುದೋ ಅದು ಮಾತ್ರ ಧರ್ಮ. ಅಧರ್ಮದ ಉತ್ಥಾನವನ್ನು ತಡೆಯುವುದೇ ದೈವಲೀಲೆ. ಈ ಧರ್ಮಾಧರ್ಮಗಳ ಸಂಘರ್ಷದಲ್ಲಿ ಮೇಲ್ನೋಟಕ್ಕೆ ಧರ್ಮವೂ ನಷ್ಟವಾದಂತೆ ಕಾಣಬಹುದು. ಆದರೆ ಅದು ಪೂರ್ಣವಾಗಿ ನಷ್ಟವಾಗಿರುವುದಿಲ್ಲ. ತಾತ್ಕಾಲಿಕ ಜಯ ಅಧರ್ಮಕ್ಕಾದರೂ, ಆತ್ಯಂತಿಕ ವಿಜಯ ಧರ್ಮಕ್ಕೆ ಮಾತ್ರ. ಈ ಮೂಲ ಸೂತ್ರವನ್ನು ಮತ್ತಷ್ಟು ಚೆನ್ನಾಗಿ ಮನಗಾಣಿಸು ವುದಕ್ಕೆ ಅನೇಕ ಉಪಾಖ್ಯಾನಗಳೂ ಮಹಾಭಾರತದಲ್ಲಿ ಬಂದಿವೆ.

## ಪಾತ್ರಗಳು

**ಶ್ರೀಕೃಷ್ಣ** : ನಾವು ಮೇಲೆ ಕಥಾಭಾಗದಲ್ಲಿ ನೋಡಿದಂತೆ ಯುದ್ಧ ನಡೆಯುವುದು ಅಥವಾ ಸಂಘರ್ಷವೊದಗುವುದು ಕೇವಲ ದಾಯಾದಿಗಳಿಗೆ ಮಾತ್ರವಲ್ಲ; ಪರಸ್ಪರ ವಿರುದ್ಧವಾದ ಎರಡು ದೃಷ್ಟಿಕೋನಗಳಿಗೆ; ಸಮನ್ವಯಾತೀತವಾದ ಎರಡು ಆಚಾರ ಮತ್ತು ವಿಚಾರ ಪರಂಪರೆಗಳಿಗೆ. ಒಂದು ಗತ ವೈದಿಕ ಸಂಪ್ರದಾಯ; ಇನ್ನೊಂದು ಆಗಾಮಿ ವಿಶಾಲಧರ್ಮ. ರೂಢ ಮೂಲವಾದ, ಗತಸತ್ತ್ವವಾದ, ಪೂರ್ವಪರಂಪರೆಯ ರಕ್ಷಕ ರಾದ ಕ್ಷತ್ರಿಯರೊಂದು ಕಡೆ; ಉದಯೋನ್ಮುಖವಾದ ಜಾತ್ಯ ತೀತ ವಿಶ್ವಧರ್ಮದ ಬೆಂಬಲಿಗರಿನ್ನೊಂದು ಕಡೆ; ಕೃಷ್ಣನನ್ನು ಗೌರವಿಸುವವರೊಂದು ಕಡೆ; ಗೌರವಿಸದವರು ಮತ್ತೊಂದು ಕಡೆ. ಜಯ ಎರಡನೆಯ ಪಕ್ಷಕ್ಕೆ, ಕೃಷ್ಣನ ಪಕ್ಷಕ್ಕೆ, ವಿಶಾಲ ವಿಶ್ವ ಧರ್ಮಕ್ಕೆ. ಅದರ ಪ್ರಫುಲ್ಲ ಕುಸುಮವೇ ಭಗವದ್ಗೀತೆ. ಎರಡಕ್ಕೂ ಸಮನ್ವಯವೇ ಶಾಂತಿಪರ್ವದ ತತ್ತ್ವಸಾರ.

ಶ್ರೋತ್ರಿಯರ ಬ್ರಹ್ಮಚರ್ಯದ ಫಲವಾಗಿ ಪ್ರಾಚೀನವೇದ ಗಳು ಇಂದಿನವರೆಗೂ ಉಳಿದು ಬಂದಿವೆ. ಅವುಗಳಿಂದ ಸಾವಿ ರಾರು ವರ್ಷಗಳ ನಂತರ ಮಹಾಭಾರತದ ರಚನೆಯಾಯಿತು. ಈ ಮಧ್ಯಂತರದ ದೀರ್ಘಕಾಲಾವಧಿಯಲ್ಲಿ ಭಾರತೀಯರ ಲೌಕಿಕ ಜೀವನಧ್ಯೇಯಗಳಲ್ಲಿ ಬೇಕಾದಷ್ಟು ಏರುಪೇರುಗಳು ಬಂದಿದ್ದವು. ವರ್ಣಾಶ್ರಮಧರ್ಮಗಳ ಬಿಗಿ ಬಹಳವಾಗಿ, ಒಂದು ಕಡೆ ಸ್ವರ್ಗಾದಿಸುಖಾಪೇಕ್ಷೆಯಿಂದ ಮಾಡುವ ಯಜ್ಞಾದಿಗಳ ಬಾಹ್ಯಪ್ರದರ್ಶನಗಳೂ ಇನ್ನೊಂದು ಕಡೆ ಮೋಕ್ಷಾಪೇಕ್ಷೆಯಿಂದ ಸಂನ್ಯಾಸಿಗಳಾಗುತ್ತಿದ್ದವರ ಆಧಿಕ್ಯವೂ ನಿತ್ಯಚಿತ್ರಗಳಾಗಿದ್ದುವು. ಮೊದಲನೆಯ ಪ್ರವೃತ್ತಿಮಾರ್ಗವು ಅಂತಸ್ಸತ್ತ್ವ ಹೀನವಾಗಿ

ವರ್ಗದ್ವೇಷಗಳನ್ನೆಲ್ಲ ಬೆಳೆಯಿಸುತ್ತಿದ್ದಿತೆಂದು ಕಾಣುತ್ತದೆ. ಅರ್ಥಕಾಮಗಳ ಸಂಯಮವನ್ನು ಸಾಧಿಸಲು ಅದರ ಅಂತಸ್ಸತ್ತ್ವವಾದ ಧರ್ಮದ ಪುನರುಜ್ಜೀವನ ಅಗತ್ಯವಾಗಿದ್ದಿತು. ಅರ್ಥಶೂನ್ಯವಾದ ಕರ್ಮಾಚರಣೆ ತಪ್ಪಿ ಭಕ್ತಿಪೂರ್ಣವಾದ ಸಮಾಜೋಪಕಾರಕವಾದ ಕರ್ಮಗಳಿಗೆ ಹೆಚ್ಚಿನ ಪ್ರಾಶಸ್ತ್ಯ ಅವಶ್ಯವಾಗಿದ್ದಿತು. ಹಾಗೆಯೇ ನಿವೃತ್ತಿಮಾರ್ಗವೂ ಸಮಾಜದ ಕಲ್ಯಾಣವನ್ನು ಕೈಬಿಡುತ್ತಿದ್ದಿರಬೇಕು. ಒಬ್ಬ ಸರ್ವಾಂತರ್ಯಾಮಿ ಭಗವಂತನ ಕಲ್ಪನೆ, ಸ್ವಾರ್ಥಕ್ಕಾಗಿ ಅಲ್ಲ; ಲೋಕಸಂಗ್ರಹಕ್ಕೆಂದು ಕರ್ಮಮಾಡುವ ಧ್ಯೇಯ, ಭಕ್ತಿಯ ಉಪಯೋಗ, ಇವು ಕೃಷ್ಣನ ಸಂದೇಶಗಳಾಗಿದ್ದುವು. ಕೃಷ್ಣನ ಕಾಲದ ಅನೇಕರಿಗೆ ಈ ನೂತನ ಧರ್ಮವು ಅಪ್ರಿಯವಾಗಿ ಕಂಡಿತು. ದೇಶವು ಅನೇಕ ಅರಸರ ಅಂಕೆಯಲ್ಲಿತ್ತು. ಒಬ್ಬೊಬ್ಬರೂ ರಾಜ್ಯಲೋಲುಪರೂ, ಭೋಗಾಸಕ್ತರೂ ಆಗಿದ್ದರು. ಇಬ್ಬರು ರಾಜರು ಶಾಂತಿಯಿಂದ ಸುಖವಾಗಿರುವುದಕ್ಕಿಂತ ಕಾದಿ ವೀರಸ್ವರ್ಗವನ್ನು ಪಡೆಯುವುದೇ ಹೆಚ್ಚಿನ ಕ್ಷಾತ್ರವೆಂಬ ವಿಪರೀತಬುದ್ಧಿಯೂ ಕೆಲವರಲ್ಲಿದ್ದಿರಬಹುದು. ಇದರಿಂದ ಪ್ರಜಾಕ್ಷೋಭೆಯಾಗುತ್ತಿದ್ದುದು ಸಹಜವಾಗಿಯೇ ಇದೆ. ಜೂಜು, ವನಿತಾಪಹಾರ, ರಾಜರನ್ನು ಸೆರೆಯಲ್ಲಿಡುವುದು ಮುಂತಾದುವು ದಿನಚರ್ಯೆಗಳಾಗಿದ್ದುವು. ಕೃಷ್ಣನು ಇದನ್ನು ತಪ್ಪಿಸಲು ಪ್ರತಿಜ್ಞೆಮಾಡಿದ ಪುಣ್ಯಾತ್ಮ. ಇದರಿಂದ ಅನೇಕ ಆರ್ಯ ಕ್ಷತ್ರಿಯರ, 'ಅನಾರ್ಯ' ದಾನವರ ವಿರೋಧವು ಅವನಿಗೆ ಗಂಟುಬಿದ್ದಿತು. ಕೃಷ್ಣನ ಸಂದೇಶವನ್ನು ಒಪ್ಪಿಕೊಂಡ ದೀರ್ಘದರ್ಶಿಗಳಲ್ಲಿ ಭೀಷ್ಮ, ವ್ಯಾಸ, ವಿದುರರು ಮುಖ್ಯರು, ಆಚರಣೆಗೆ ತರಲು ಯತ್ನಿಸಿದವರು ಪಾಂಡವರು. ಸಾಮಾನ್ಯ ಜನರು ಆಗಲೇ ಅವನನ್ನು ಪ್ರತ್ಯಕ್ಷದೇವತೆಯೆಂದು

ಪೂಜಿಸುತಿದ್ದರೂ ಆಶ್ಚರ್ಯವಿಲ್ಲ. ಹತ್ತಾರು ಅರಸರನ್ನು ಗೆದ್ದರೂ ತಾನು ಸಿಂಹಾಸನವನ್ನೇರದೆ, ಎಲ್ಲ ವರ್ಗದವರಲ್ಲೂ ರಕ್ತಸಂಬಂಧ ಬೆಳೆಸಿ, ಯುದ್ಧ ಅನಿವಾರ್ಯವಾದರೂ ತಾನು ಶಸ್ತ್ರ ಹಿಡಿಯದೆ, ವಿಶ್ವಶಾಂತಿಗಾಗಿ ಸರ್ವಪ್ರಯತ್ನವನ್ನೂ ಮಾಡಿದ ಮಹಾತ್ಮನೇ ಕೃಷ್ಣ. ಯುದ್ಧವು ಏನನ್ನು ಸಾಧಿಸುವುದಿಲ್ಲವೆಂಬುದನ್ನು ತೋರಿಸುವ ಸಲುವಾಗಿಯೇ ತನ್ನ ನೀತಿಬಲದಂತೆ ದೈವೀಬಲವನ್ನೂ, ಪಾಂಡವರಿಗೆ ಧಾರೆಯೆರೆದು ಅವರಿಗೆ ವಿಜಯ ಸಂಪಾದಿಸಿಕೊಟ್ಟು, ಸಾಂಪ್ರದಾಯಿಕ ವಾಗಿ ಬಂದಿದ್ದ ಕ್ಷತ್ರಿಯ ರಣೋತ್ಸಾಹದ ಚರಮಗೀತೆ ಯನ್ನು ಹಾಡಿದ ಯುಗಪುರುಷನೇ ಶ್ರೀಕೃಷ್ಣ. ಶ್ರೀ ಅರ ವಿಂದರು ಹೇಳುವಂತೆ:—‘ನಿಷ್ಕಾಮಕರ್ಮವೆಂಬ ಯಾವ ಸಿದ್ಧಾಂತವನ್ನು ದ್ವಾರಕೆಯ ಕೃಷ್ಣನು ಬೋಧಿಸಿ, ದ್ವೈಪಾ ಯನ ಕೃಷ್ಣನು ಪ್ರಚಾರಮಾಡಿದನೋ, ಅದೇ ಮಹಾಭಾರತದ ಮುಖ್ಯ ಸ್ವರ.’ ಶಾಂತಿಯನ್ನು ಏನು ಮಾಡಿದರೂ ಒಪ್ಪದ ಮದೋನ್ಮತ್ತ ಕ್ಷತ್ರಿಯರಿಗೆ ಯುದ್ಧದ ಮೂಲಕ ಪಾಠ ಕಲಿಸಬೇಕಾಯಿತು. ಭಾರತಸಂಗ್ರಾಮವೆಂಬುದು ಒಂದು ಮಹಾನದಿ. ಭೀಷ್ಮದ್ರೋಣರೇ ಅದರ ಎರಡು ದಡಗಳು. ಜಯದ್ರಥನೇ ಹರಿವ ನೀರು, ಶಕುನಿಯೇ ನಡುವಿನ ಕಗ್ಗಲ್ಲ ಬಂಡೆ, ಶಲ್ಯನೇ ಮೊಸಳೆ, ಕೃಪನೇ ತೆಪ್ಪ, ಕರ್ಣನೇ ಅಲೆಯ ಸಾಲು, ಅಶ್ವತ್ಥಾಮ ವಿಕರ್ಣರು ಘೋರ ಜಲಚರಗಳು, ದುರ್ಯೋಧನನೇ ಸುಳಿ. ಆದರೆ ಪಾಂಡವರು ಈ ಭಯಂಕರ ರಣ ನದಿಯನ್ನೂ ದಾಟಿದರು—ಕೃಷ್ಣನೆಂಬ ಅಂಬಿಗನಿದ್ದುದ ರಿಂದ :—

ಭೀಷ್ಮದ್ರೋಣತಟಾ ಜಯದ್ರಥಜಲಾ ಗಾಂಧಾರನೀಲೋಪಲಾ
ಶಲ್ಯಗ್ರಾಹವತೀ ಕೃಪೇಣ ವಹನೀ ಕರ್ಣೇನ ವೇಲಾಕುಲಾ ।

ಅಶ್ವತ್ಥಾಮವಿಕರ್ಣಘೋರಮಕರಾ ದುರ್ಯೋಧನಾವರ್ತಿನೀ
ಸೋತ್ತೀರ್ಣಾ ಖಲು ಪಾಂಡವೈ ರಣನದೀ ಕೈವರ್ತಕಃ ಕೇಶವಃ ||

(ಧ್ಯಾನಶ್ಲೋಕ)

ಪ್ರೊ|| ವಿ. ಸೀತಾರಾಮಯ್ಯನವರು ಮಹಾಭಾರತದಲ್ಲಿ ಶ್ರೀ ಕೃಷ್ಣನ ಪಾತ್ರವನ್ನು ಕೆಳಗಿನ ಸಾರವತ್ತಾದ ವಾಕ್ಯಗಳಲ್ಲಿ ಚಿತ್ರಿಸಿದ್ದಾರೆ:—"ಆತನು ಹುಟ್ಟಿದಂದಿನಿಂದಲೂ ಕಷ್ಟ ಜೀವಿಯೇ. ಅಪಾಯುಗಳ ದವಡೆಯಲ್ಲಿ ಸಿಕ್ಕಿಕೊಂಡಿದ್ದರೂ ಅದನ್ನು ಹಿರಿದು ಹೊರಕ್ಕೆ ಬಂದು ಪಾಂಡವರ ಮೂಲಕ ಖಳಮಂಡಲವನ್ನೆಲ್ಲ ಮುರಿದನು. ತನ್ನ ವಂಶದಲ್ಲಿನ ಅಂತಃ ಕಲಹಗಳನ್ನೆಲ್ಲ ಸರಿಪಡಿಸಿದನು. ಲಂಪಟತೆಗಳನ್ನು ಭಗ್ನ ಮಾಡಿದನು. ಇತ್ತ ಅಕ್ರೂರ, ವಸುದೇವ, ಬಲರಾಮರ ಯಾಜಮಾನ್ಯಕ್ಕೆ ಒಳಪಟ್ಟಿದ್ದರೂ, ಅತ್ತ ಯುಧಿಷ್ಠಿರನ ಯಾಜಮಾನ್ಯವನ್ನು ಒಪ್ಪಿಕೊಂಡಿದ್ದರೂ ಎಲ್ಲರಿಂದಲೂ ಮಾನಿತನಾಗಿ, ಎಲ್ಲರಿಗೂ ತಿಳಿಯುಹೇಳಿ, ಎಲ್ಲರಿಂದಲೂ ಕೆಲಸಮಾಡಿಸಿದನು. ಎಂತಹ ವಿಪತ್ತುಗಳ ಮಧ್ಯದಲ್ಲಿಯೂ ಸರಸವಾದ, ಸಮತೆ ತಪ್ಪದ, ಸಾತ್ತ್ವಿಕ ಜೀವನವನ್ನು ನಡೆಯಿಸಿಕೊಂಡನು ಎಂದು ಹೇಳಬಹುದೇ ಹೊರತು ಮಹಾಭಾರತವನ್ನೆಲ್ಲ ಹುಡುಕಿದರೂ ಎಲ್ಲಿಯೇ ಆಗಲಿ, ಒಂದು ದುರಾಶೆಯು, ಒಂದು ಕಾಮುಕತೆಯು ಸೂಚನೆ (ಶಿಶುಪಾಲನ ಮೂದಲಿಕೆಗಳಲ್ಲಿ ಕೂಡ), ಅಧರ್ಮಕಾರ್ಯದ ಒಂದು ನೆಳಲು ಕವಿದು ಬರುವುದಿಲ್ಲ. ಆತನಿಗೆ ಬಿತ್ತವಾವುದು, ಜೊಟ್ಟು ಯಾವುದು, ಕಳೆ ಯಾವುದು ಪಯಿರಾವುದು ಎಂಬುದು ಗೊತ್ತು. ಆದುದರಿಂದ ಆತನು ಆಗಿನ ಭರತಖಂಡದಲ್ಲಿ ನಾಶಯೋಗ್ಯವಾದುವನ್ನೆಲ್ಲ ನಾಶಮಾಡಿ, ಧರ್ಮವನ್ನು ಬೆಳೆದಿದ್ದಾನೆ. ಇಂಥ

ನನ್ನಲ್ಲದೆ ಬೇರೆ ಯಾರನ್ನು ದೇವರೆನ್ನುವುದು? **ಜೀವನದ ಪ್ರತಿಯೊಂದು ರಂಗದಲ್ಲಿಯೂ ಮಾನವನ ಯೋಗ್ಯತೆಯ ಪರಮಾವಧಿಯನ್ನು ಆತನು ತೋರಿಸಿದ್ದಾನೆ.** ಕೇವಲ ದೇವರು ಹೀಗೆಲ್ಲ ಮಾಡಿದನೆಂದರೆ ಹೆಚ್ಚಿಗೆಯೇನೂ ಇಲ್ಲ; ಮನುಷ್ಯನಾಗಿದ್ದವನು ಈ ಬಗೆಯ ಗರಿಮೆಯಿಂದ ದೈವತ್ವವನ್ನು ಪಡೆದನೆಂದರೆ ಮಾನವವರ್ಗಕ್ಕೇ ಗೌರವ, ಭರವಸೆ. ಎಲ್ಲ—ಯತ್ನಗಳಿಗೂ ನಂಬಿಕೆ, ಉತ್ತೇಜನ, ಮೇಲ್ಪಂಕ್ತಿ ಇದ್ದುದೂ ಹಾಗೆಯೇ."*

ಮಿಕ್ಕ ಪಾತ್ರಗಳ ಸ್ವಭಾವವನ್ನೆಲ್ಲ ಪಂಪನು ಹೇಳುವಂತೆ ಒಂದೊಂದೇ ಮಾತಿನಲ್ಲಿ ಬೇಕಾದರೂ ಖಚಿತವಾಗಿ ನಿರ್ದೇಶಿಸಬಹುದು:—

ಚಲದೊಳ್ ದುರ್ಯೋಧನಂ, ನನ್ನಿಯೊಳ್ ಇನತನಯಂ,
ಗಂಡಿನೊಳ್ ಭೀಮಸೇನಂ
ಬಲದೊಳ್ ಮದ್ರೇಶನ್ ಅತ್ಯುನ್ನತಿಯೊಳ್ ಅಮರಸಿಂಧೂದ್ಭವಂ
ಚಾಪವಿದ್ಯಾ |
ಬಲದೊಳ್ ಕುಂಭೋದ್ಭವಂ ಸಾಹಸದ ಮಹಿಮೆಯೊಳ್
ಫಲ್ಗುಣಂ ಧರ್ಮದೊಳ್ ನಿ
ರ್ಮಲಚಿತ್ತಂ ಧರ್ಮಪುತ್ರಂ ಮಿಗಿಲವರ್ಗಳಿಸೀ ಭಾರತಂ
ಲೋಕಪೂಜ್ಯಂ ||

**ದುರ್ಯೋಧನನ** ಛಲವನ್ನು ಕವಿ ಇಲ್ಲಿ ಗುಣವೆಂದಿದ್ದಾನೆಂದು ತೋರುತ್ತದೆ; ದೋಷವೆಂದಲ್ಲ. ಹಿಡಿದ ಹಟವನ್ನು ಕೊನೆಯವರೆಗೂ ಸಾಧಿಸಿಯೇ ತೀರುವೆನೆಂಬ ಹಟವಷ್ಟೇ ಅಲ್ಲ; ಸಾಧಿಸಿದ ಸಿದ್ಧಿಯೂ ಅವನದು. ಕ್ಷತ್ರಿಯರಾದವರು

---

*ಕವಿಕಾವ್ಯದೃಷ್ಟಿ: ಭಾರತಗಳ ಶ್ರೀಕೃಷ್ಣ, ಪು. ೯೭

ರಾಜ್ಯವನ್ನು ಬೇಡಲೂ ಬಾರದು; ನೀಡಲೂ ಬಾರದು ಎಂದ
ಗಟ್ಟಿಯಾಗಿ ನಂಬಿದ್ದನವನು. ಪಾಂಡವರು ತನ್ನ ವೈ
ಗಳೆಂದು ಬಾಲ್ಯದಿಂದಲೂ ತೀರ್ಮಾನಿಸಿ, ಅವರನ್ನು ಸರ್ವೋ
ಪಾಯಗಳಿಂದಲೂ ದಮನಮಾಡಿಯೇ ತೀರಬೇಕೆಂಬ ದೃ
ನಿಶ್ಚಯ ಆತನದು. ಅವನ ಅಭಿಮಾನ ಛಲದಷ್ಟೇ ಹೆಚ್ಚಿ
ಗುಣ. ಜ್ಯೇಷ್ಠ ಧೃತರಾಷ್ಟ್ರನ ಮಗನಾದ ತಾನು ಪಾಂಡ
ಪುತ್ರರಿಗಿಂತ ಕಡಿಮೆಯೆಂದು ಎಂದಿಗೂ ಒಪ್ಪಲಾರದ ಅಭಿ
ಮಾನ ಅವನದು. ಅವರ ಯಾಗದ ವೈಭವವನ್ನು ನೋಡಿ
ದಾಗ ಇವನ ಅಭಿಮಾನಕ್ಕೆ ಆಘಾತವಾಯಿತು. ಅವರನ್ನು
ಜೂಜಿನಲ್ಲಿ ಸೋಲಿಸಿ ಮನವಾರೆ ಭಂಗಿಸುವವರೆಗೂ ಅವನಿಗೆ
ಮನಶ್ಶಾಂತಿಯಿರಲಿಲ್ಲ. ಮುಂದೆ ಪಾಂಡವರನ್ನು ಕಾಡು
ಮೇಡುಗಳಲ್ಲಿ ಅಲೆಸಿದಷ್ಟು ಅವನಿಗೆ ಸಮಾಧಾನ. ಅವರು
ದಿವ್ಯಾಸ್ತ್ರಗಳನ್ನು ಪಡೆದು ಅಜೇಯರಾಗಿರುವರೆಂದು ಯಾರು
ಬಂದು ಹೇಳಿದರೂ ಸ್ವಲ್ಪವಾದರೂ ಯುದ್ಧಭೀತಿಯಿಲ್ಲ. ಇಟ್ಟ
ಹೆಜ್ಜೆಯನ್ನು ಏನೇ ಬಂದರೂ ಹಿಂತೆಗೆಯುವವನಲ್ಲ. ತನ್ನ
ಕಡೆ ಎಷ್ಟೇ ಹಾನಿಯಾದರೂ, ಯುದ್ಧವಿಮುಖನಾಗುವುದಿಲ್ಲ.
ಕರ್ಣನಲ್ಲಿ ಅವನಿಗಿದ್ದ ಮೈತ್ರಿ ಕೃಷ್ಣಾರ್ಜುನರ ಮೈತ್ರಿಗಿಂತ
ಕಡಿಮೆಯದೇನೂ ಅಲ್ಲ. ಅಂತಹ ಪ್ರಾಣಮಿತ್ರನೂ, ನೂರು
ಮಕ್ಕಳೂ ಸತ್ತರೂ, ಸಂತೋಷದಿಂದ ವೀರನಂತೆ ಕಾದಿ ರಣ
ರಂಗದಲ್ಲಿ ಮಡಿಯುವವನೇ ಹೊರತು, ಜೀವಗಳ್ಳನಾಗಿ ಶಾಂತಿ
ಗೊಪ್ಪುವುದಿಲ್ಲ. ದುರ್ಯೋಧನನ ಈ ಗುಣಗಳೇ ದುರ್ದೈವ
ದಿಂದ ದೋಷಗಳಂತಾದುವು; ಅವನದು ದುರುದ್ದೇಶವಾದ್ದ
ರಿಂದ. ದುರ್ಯೋಧನನ ಊರುಭಂಗಕ್ಕೆ ಧೃತರಾಷ್ಟ್ರನ ಅವಿ
ವೇಕವೂ ದೊಡ್ಡ ಕಾರಣವೆಂಬುದನ್ನು ಮರೆಯಬಾರದು.

ವಿದುರಾದಿಗಳು ಹೇಳಿದ ಮಾತನ್ನು ಕೇಳಿ ಧೃತರಾಷ್ಟ್ರನು ದುರ್ಯೋಧನನಿಗೆ ಸರಿಯಾದ ಬುದ್ಧಿ ಹೇಳಿದ್ದರೆ ಅವನ ಜೀವನವೇ ಬೇರೆಯಾಗಬಹುದಾಗಿದ್ದಿತು. ದುರ್ಯೋಧನನ ಪಾತ್ರದಲ್ಲಿ ಅವನ ಘನತೆಗೆ ಕುಂದು ಬಂದಿಲ್ಲವೆಂಬುದನ್ನು ಮರೆಯುವಂತಿಲ್ಲ. ಪ್ರತಿಭಾವೇಶದಿಂದ ದುರ್ಯೋಧನನ ಚರಮಗೀತೆಯನ್ನು ಪಂಪ ಹೀಗೆ ಹಾಡಿದ್ದಾನೆ:

ನುಡಿದುದನೆಯ್ದೆ ತುತ್ತ ತುದಿಯೆಯ್ದುವಿನಂ ನುಡಿದಂ ಚಲಂ
ಚಲಂ
ಬಿಡಿದುದನೆಯ್ದೆ ಮುಂ ಪಿಡಿದುದಂ ಪಿಡಿದಂ ಸಲೆ ಪೂಣ್ದ
ಪೂಣ್ಕೆ ನೇ
ರ್ಪಡೆ ನಡೆವನ್ನೆಗಂ ನಡೆದನಳ್ಕದೆ ಬಳ್ಕದೆ ತನ್ನೊಡಲ್ ಪಡ
ಲ್ವಡುವಿನಮುಣ್ಮುಗುಂದನೆ ದಲೇನಭಿಮಾನಧನಂ
ಸುಯೋಧನಂ !

**ಕರ್ಣ** : ಮಹಾಭಾರತದಲ್ಲಿ ನಮ್ಮ ಸಹಾನುಭೂತಿಯನ್ನು ಸೆಳೆಯುವ ಇನ್ನೊಬ್ಬ ನಾಯಕನೆಂದರೆ ಕರ್ಣ. ಅವನು ಸೂರ್ಯಪುತ್ರ; ಆದರೆ ಸೂತಪುತ್ರನೆಂಬ ಅವಮಾನ ತಿರಸ್ಕಾರಗಳಿಗೆ ಗುರಿಯಾಗಬೇಕಾಯಿತು. ಅವನು ಕುಂತೀಸುತ; ಪಾಂಡವರ ಅಗ್ರಜ; ಆದರೆ ಕೌರವನ ಪ್ರಾಣಸ್ನೇಹಿತನಾಗಿ ಪಾಂಡವರ ವಿರುದ್ಧವಾಗಿಯೇ ಬಾಳಬೇಕಾಯಿತು. ಶೌರ್ಯದಲ್ಲಿ ಅರ್ಜುನನಿಗಿಂತಲೂ ಅಧಿಕ; ಆದರೆ ಎಲ್ಲ ಸಮಯದಲ್ಲಿಯೂ ಅರ್ಜುನನಿಗೆ ಕಡಿಮೆಯೆನ್ನುವಂತೆ ಅವನ ಗತಿಯಾಯಿತು. ಪರಶುರಾಮನ ಧನುರ್ವೇದವೆಲ್ಲವೂ ಗೊತ್ತಿದ್ದರೂ ಕಾಲಕ್ಕೆ ನೆನಪಾಗದಂತಹ ಗುರುಶಾಪ ಅವನದು; ಅವನ ಜನ್ಮವನ್ನು

ಕುಂತಿ ಮರೆಸಿಟ್ಟುದರ ಪರಿಣಾಮವೇ ಇಷ್ಟು. ಹಿಂದಿನ ಕಾಲದಲ್ಲಿ ಕುಲಹೀನನೊಬ್ಬನಿಗೆ ವಿದ್ಯೆ, ಅಂತಸ್ತು, ಗೌರವ, ಎಲ್ಲದರಲ್ಲಿಯೂ ಹೇಗೆ ಅನಾದರವೊದಗುತ್ತಿದ್ದಿತೆಂಬುದನ್ನು ಕರ್ಣನ ಪಾತ್ರದ ಮೂಲಕ ವ್ಯಾಸರು ಮಾರ್ಮಿಕವಾಗಿ ತೋರಿಸಿದ್ದಾರೆ. ಆದರೆ ಕರ್ಣ ಇತರರಂತೆ ತನ್ನ ಸಾಮರ್ಥ್ಯ ವನ್ನು ಅಡಗಿಸಿಕೊಂಡು ಕುಳಿತುಕೊಳ್ಳುವುದಿಲ್ಲ. ಶತಪ್ರಯತ್ನ ದಿಂದಲೂ ಮುನ್ನುಗ್ಗಿ, ಎಂತಹ ವಿರುದ್ಧ ಸನ್ನಿವೇಶದಲ್ಲಿಯೂ ತನ್ನ ಯೋಗ್ಯತೆಯನ್ನು ಬೆಳಗಲು ಸಾಹಸಮಾಡುತ್ತಾನೆ. ಹೀಗೆ ಅವನ ಜೀವನದಲ್ಲಿ ಪರಿಸ್ಥಿತಿಯೊಡನೆ ಹೋರಾಟ ಮೊದಲಿನಿಂದಲೂ ನಡೆದು ಅವನು ಅಂಗಾಧಿಪತಿಯಾಗಿ, ಕೌರವೇಂದ್ರನೊಡನೆ ಏಕಾಸನದಲ್ಲಿ ಕುಳ್ಳಿರುವ ಗೌರವವನ್ನೂ ಪಡೆದು ವಿಜಯಿಯಾಗುತ್ತಾನೆ. ಅವನ ಸ್ವಭಾವವೇ ಉದಾ ವಾದುದು. ಉಳಿದವರಾರೂ ಮಾಡಲಾಗದುದನ್ನು ಮಾ ತೋರಿಸುವ ಹುಮ್ಮಸ್ಸು ಕರ್ಣನದು. ವಿಧಿಯನ್ನು ನಂ ನಿಷ್ಕ್ರಿಯನಾಗುವುದರ ಬದಲು ಸಹಜ ಕುಂಡಲಾದಿಗಳನ್ನೂ ದಾನಕೊಟ್ಟು ತ್ಯಾಗಶೂರನೆನಿಸುವ ವೀರನೇ ಕರ್ಣ. ಅವನಿ ಅನ್ಯಾಯ ಮಾಡಿದ ತಾಯಿಯ ಮೇಲೆಯೂ ಕೋಪವಿಲ್ಲ ಅವಳ ಹಿತಕ್ಕಾಗಿ ತನ್ನ ಜೀವವನ್ನೇ ತೆರಲು ಸಿದ್ಧನಾಗುತ್ತಾನೆ ಆದರೆ ಲೋಕವೇ ತನ್ನನ್ನು ತಾತ್ಸಾರ ಮಾಡುತ್ತಿದ್ದಾ ಯಾರೂ ಕಂಡು ಕೇಳದ ಉಪಕಾರ ಮಾಡಿ, ತನಗೆ ರಾಜ ಗೌರವಗಳನ್ನು ಕೊಟ್ಟು ಪ್ರಾಣಸ್ನೇಹಿತನಾದ ದುರ್ಯೋ ಧನನ ಹಿತಕ್ಕಾಗಿ ಜೀವವನ್ನೇ ಮುಡಿಪಾಗಿಡುತ್ತಾನೆ. ತನ್ನನ ಜರೆದ ಸಮಾಜವನ್ನು ಪ್ರತಿಭಟಿಸಿ ನಿಲ್ಲುತ್ತಾನೆ 'ಜಾತಿಯನ ಸುಡಿ. ಗುಣಕ್ಕೆ ಬೆಲೆ ಕೊಡಿ' ಎಂಬುದು ಅವನ ಧ್ಯೇಯ.

ಸೂತೋ ವಾ ಸೂತಪುತ್ರೋ ವಾ ಯೋ ವಾ ಕೋ ವಾ
ಭವಾಮ್ಯಹವರ್ |
ದೈವಾಯತ್ತಂ ಕುಲೇ ಜನ್ಮ ಮದಾಯತ್ತಂ ತು ಪೌರುಷವರ್ ||

ಎಂದು ಗರ್ಜಿಸುವ ಧೀರ ಕರ್ಣ. ಕರ್ಣ ಕೆಳಗೆ ಬಿದ್ದಾಗ ಒಂದು ಕ್ಷಣ ನದಿಗಳೂ ಹರಿಯದೆ ನಿಂತುಬಿಟ್ಟುವು; ಸೂರ್ಯನು ನೋಡಲಾರದೆ ಮುಳುಗಿದನು. ಆಕಾಶ ಒಡೆಯಿತು, ಭೂಮಿ ನಡುಗಿತು. ಬಿರುಗಾಳಿಗಳು ಬೀಸಿದುವು, ದೇವತೆಗಳು ಗೋಳಿಟ್ಟರು" ಎಂದು ಭಾರತ ವರ್ಣಿಸಿದೆ.

ಮಹಾಕವಿ ಪಂಪನ ಹೃದಯ ಕರ್ಣನನ್ನು ಹೀಗೆ ಕೊಂಡಾಡುತ್ತದೆ, ಅವನು ಕಾವ್ಯಕ್ಕೆ ಪ್ರತಿನಾಯಕನಾದರೂ ಕೂಡ:—

ನೆನೆಯದಿರಣ್ಣ ಭಾರತದೊಳಿನ್ ಪೆರರಾರುಮನೊಂದೆ ಚಿತ್ತದಿಂ
ನೆನೆವೊಡೆ ಕರ್ಣನಂ ನೆನೆಯ ಕರ್ಣನೊಳಾರ್ ದೊರೆ ಕರ್ಣನೇರು ಕ-
ರ್ಣನ ಕಡುನನ್ನಿ ಕರ್ಣನಳವಂಕದ ಕರ್ಣನ ಚಾಗಮೆಂದು ಕ
ರ್ಣನ ಪಡೆಮಾತಿನೊಳ್ ಪುದಿದು ಕರ್ಣರಸಾಯನಮಲ್ತೆ ಭಾರತಂ ||

ಭಾರತವು ನಿಜವಾಗಿಯೂ ಕರ್ಣನ ಪಾತ್ರದಿಂದ ಕರ್ಣ ರಸಾಯನವಾಗಿದೆ!

**ದ್ರೌಪದಿ**: ಇವಳು ಕ್ಷತ್ರಕ್ಷಯಕ್ಕಾಗಿಯೇ ಹುಟ್ಟಿದ ಅಗ್ನಿಕನ್ಯೆ, ಶಕ್ತಿಸ್ವರೂಪಿಣಿ, ಎನಿಸುತ್ತದೆ ಮಹಾಭಾರತವನ್ನು ನೋಡಿದರೆ. ಮಹಾಭಾರತದ ಯುದ್ಧಕ್ಕೆ ಮೂಲ ರಾಜಸಭೆಯಲ್ಲಿ ದುಶ್ಯಾಸನನು ಬಿಚ್ಚಿದ ಇವಳ ಕೇಶಪಾಶ. ಯುದ್ಧ ಮುಗಿದುದು ಇವಳು ಮತ್ತೆ ಮುಡಿ ಕಟ್ಟಿದಾಗ. ಈಕೆಯ, ಸ್ವಯಂವರದಲ್ಲಿ ಅರ್ಜುನನ ಬದಲು ಬೇರೆ ಯಾರಿಗಾದರೂ ಮಾಲೆಹಾಕಿದ್ದರೆ ಮಹಾಭಾರತದ ಯುದ್ಧವಾಗುತ್ತಿರಲಿಲ್ಲ. ಭೀಮನಿರಲಿ, ಧರ್ಮಾ

ವತಾರನಾದ ಯುಧಿಷ್ಠಿರ ಮತ್ತು ಕೃಷ್ಣ ಇಬ್ಬರ ಸ್ಥೈರ್ಯವನ್ನೂ ಮೀರಿಸುವಂತಾದುದು ಈಕೆಗಾದ ಅವಮಾನ. ದ್ರೌಪದಿಯ ಛಲವು ದುರ್ಯೋಧನನ ಛಲಕ್ಕೆ ಸಮಾನವಾದುದೇ. ಅಷ್ಟು ಜನ ನೆರೆದ ರಾಜಸಭೆಯಲ್ಲಿ ಧೈರ್ಯವಾಗಿ ನಿಂತು ವಾದಿಸಬಲ್ಲ, ವಾದಿಸಿ ಧೃತರಾಷ್ಟ್ರನಿಂದ ವರ ಪಡೆಯಬಲ್ಲ ದಿಟ್ಟೆ ಆಕೆ. ಅವಳು ಭಯವೆಂಬುದನ್ನು ಕಂಡರಿಯಳು. ಪಂಚವಲ್ಲಭೆ ಯಾದರೂ ಎಲ್ಲರನ್ನೂ ಅನುಸರಿಸಿಕೊಂಡು ನಡೆದ ಪತಿವ್ರತೆ. ಕಾಡಿನಲ್ಲಿ ಜಯದ್ರಥನು ಬಂದು ಅಪಹರಿಸಿದರೆ, ಅವಳು ಸೀತೆ ಯಂತೆ ಪ್ರಲಾಪ ಮಾಡುವುದಿಲ್ಲ. ಪಾಂಡವರು ಬಂದು ಬಿಡಿಸಿ ಕೊಂಡು ಹೋಗಿಯೇ ತೀರುವರೆಂದು ಧೈರ್ಯದಿಂದಿರುತ್ತಾಳೆ. ಅವನನ್ನು ತನ್ನ ಕಾಲಮೇಲೆ ತಂದು ಕೆಡಹುವವರೆಗೆ ಅವಳಿಗೆ ಸಮಾಧಾನವಿಲ್ಲ. ಅವಳಿಗಾದ ಅವಮಾನವೇ ಕೃಷ್ಣನನ್ನೂ 'ಯುದ್ಧ ನಡೆದರೆ ನಡೆದೇ ಹೋಗಲಿ; ಭೂಮಿಯ ಭಾರ ಇಳಿಯಲಿ' ಎಂಬ ಮಟ್ಟಕ್ಕೆ ತರುತ್ತದೆ. ಶಾಂತಿದೂತನನ್ನು ಯುದ್ಧಸಾರಥಿಯನ್ನಾಗಿ ಮಾಡುತ್ತದೆ. ಅವಳು ಅಳಲನ್ನು ತೋಡಿಕೊಳ್ಳುವುದು, ಕಣ್ಣೀರಿಡುವುದು, ಕೃಷ್ಣನೊಡನೆ ಮಾತ್ರ. ಯುಧಿಷ್ಠಿರನ ಧರ್ಮವ್ರತವನ್ನು ಮತ್ತಾರೂ ಕದಲಿಸಲಾರ ರೆಂಬುದು ಆಕೆಗೆ ಚೆನ್ನಾಗಿ ಗೊತ್ತಿದ್ದಿತು. ಕೀಚಕನು ಅವಳಿಗಾಗಿ ಆಸೆಪಟ್ಟು ಭೀಮನಿಂದ ಹತನಾದುದೇ ಕೌರವರಿಗೆ ಪಾಂಡವರ ನೆಲೆ ತಿಳಿಯಲು ಅವಕಾಶವಿತ್ತಿತು; ಗೋಗ್ರಹಣಕ್ಕೆ ಪ್ರೇರಿಸಿತು. ವನವಾಸಕಾಲದಲ್ಲೆಲ್ಲ ಭೀಮಾರ್ಜುನಾದಿಗಳಲ್ಲಿ ರಣೋತ್ಸಾಹವನ್ನು ತನ್ನ ಧೀರವಾಣಿಯಿಂದ ಎಡೆಬಿಡದೆ ತುಂಬಿ ಅವರನ್ನು ಮಹಾಕಾರ್ಯಗಳಿಗೆ, ಮಹಾಸಾಹಸಗಳಿಗೆ ಹುರಿದುಂಬಿಸಿದ ಧೀರೆ ದ್ರೌಪದಿ. ಮಹಾಭಾರತದ ಸರ್ವ

ನಾಶದಿಂದ ಒಂದು ಕ್ಷಣ ಯಾರಿಗಾದರೂ ಸಮಾಧಾನದ ನಿಟ್ಟುಸಿರು ಬಂದಿದ್ದರೆ ಅದು ದ್ರೌಪದಿಗೇ ಇರಬೇಕು. ಈ ವೀರನಾರಿಯ ಚರಿತೆ ನಿತ್ಯಸ್ಮರಣೀಯವೆಂದು ಭಾರತೀಯರು ಆಕೆಗೆ ಸೀತೆಗೆ ಸಮವಾದ ಸ್ಥಾನವನ್ನೇ ಕೊಟ್ಟಿದ್ದಾರೆ. ಪಾಂಡವರ ಕಡೆ ಏಳು ಅಕ್ಷೋಹಿಣೀ ಸೈನ್ಯ ಸೇರಿದ್ದಕ್ಕೂ ಪಾಂಚಾಲ ರಾಜನ ಪ್ರಯತ್ನವೇ ಮುಖ್ಯ ಕಾರಣವೆಂಬುದನ್ನು ಮರೆಯುವಂತಿಲ್ಲ. ದ್ರೌಪದಿಯೂ ಕೂಡ ಪುತ್ರಶೋಕದಿಂದ ಕಡೆಗೆ ತೊಳಲುವ ಸ್ಥಿತಿಯಾಯಿತು; ಆಗಲೂ ಅಶ್ವತ್ಥಾಮನ ಮೇಲೆ ಮುಯ್ಯನ್ನು ತೀರಿಸಿದಲ್ಲದೆ ಅವಳ ಶೋಕ ಇಳಿಯುವಂತಿಲ್ಲ! ಪಂಪನು ದ್ರೌಪದಿಯ ಕೇಶಪಾಶವನ್ನು ಕಡೆಗೆ ಭೀಮನ ಬಾಯಿಂದ ಹೀಗೆ ಬಣ್ಣಿಸುತ್ತಾನೆ:—

ಇದರೊಳ್ ಶ್ವೇತಾತಪತ್ರ ಸ್ಥಗಿತ ದಶ ದಿಶಾ ಮಂಡಲಂ ರಾಜಚಕ್ರಂ।
ಪುದಿದಳ್ಕಾಡಿತ್ತಡಂಗಿತ್ತಿದರೊಳೆ ಕುರುರಾಜಾನ್ವಯಂ ಮತ್ಪ್ರತಾಪ-।
ಕ್ಕಿದರಿಂದಂ ನೋಡಗುರ್ವುರ್ವಿದುದಿದುವೆ ಮಹಾಭಾರತಕ್ಕಾದಿ ಯಾಯ್ತು।
ಬ್ಜದಳಾಕ್ಷೀ ಪೇಳ ಸಾಮಾನ್ಯಮೆ ಬಗೆಯ ಭವತ್ಕೇಶಪಾಶಪ್ರಪಂಚಂ॥

## ಯುಧಿಷ್ಠಿರ

ಎಂತಹ ಪರಿಸ್ಥಿತಿಯಲ್ಲಿಯೂ ಧರ್ಮವನ್ನು ಬಿಡುವುದಿಲ್ಲವೆಂಬ ನಿಶ್ಚಲ ಸ್ಥೈರ್ಯ ಯುಧಿಷ್ಠಿರನದು. ಅವನು ಧರ್ಮಜನಷ್ಟೇ ಅಲ್ಲ; ಧರ್ಮರಾಜನೂ ಹೌದು. ನಿಷ್ಕಾರಣವಾಗಿ ಒಬ್ಬನಿಗೆ ವಿಧಿ ಎಷ್ಟೆಷ್ಟು ಕಷ್ಟನಷ್ಟಗಳನ್ನು ಕೊಡಬಹುದೋ ಅಷ್ಟನ್ನೂ ಒಂದಾದಮೇಲೊಂದು ಸುರಿಸಿದರೂ, ಧರ್ಮಜನ ಧರ್ಮಶ್ರದ್ಧೆ ಒಂದೇ ವಿಧವಾಗಿ ಉಳಿಯುತ್ತದೆ. ಅವನು ಧರ್ಮಾತ್ಮನೆಂಬುದನ್ನು ಧೃತರಾಷ್ಟ್ರನೇ ಮೊದಲಾಗಿ ಕೌರವರೂ

ಒಪ್ಪುತ್ತಾರೆ. ಸತ್ಯದಲ್ಲಿ ಹರಿಶ್ಚಂದ್ರನಿಗೆ ಕಡಿಮೆಯವನಲ್ಲ. ಇನ್ನು ಯಾರೇ ಆಗಿದ್ದರೂ ಧೃತರಾಷ್ಟ್ರನು ಹೇಳಿದಂತೆಲ್ಲ ಕೇಳುವ ಹವ್ಯಾಸಕ್ಕೆ ಹೋಗುತ್ತಿರಲಿಲ್ಲ. ಧೃತರಾಷ್ಟ್ರನ ದುರುದ್ದೇಶಗಳು ಗೊತ್ತಿದ್ದರೂ ಅವನ ಮಾತಿಗೆ ಚಾಚೂ ತಪ್ಪದೆ ನಡೆದುಕೊಳ್ಳುತ್ತಿರಲಿಲ್ಲ. ಸರ್ವಸ್ವನಾಶವಾದರೂ, ಅವನ ಸತ್ಯ ನಿಶ್ಚಲ. ಜೂಜೂ ಯುದ್ಧವೂ ಎರಡೂ ಒಂದೇ ಎಂದು ಅವನ ನಂಬಿಕೆ. ಒಪ್ಪಿ ಒಡ್ಡಿದೆ ಎಂದಮೇಲೆ, ಸೋತ ಮೇಲೆ, ಸೋಲ ಲಿಲ್ಲ ಎಂದು ಅವನು ಜಗಳವಾಡಲಾರ. ದ್ರೌಪದಿಯೇ ಬಂದು ಪ್ರಶ್ನೆ ಹಾಕಿದರೂ ತಾನು ತನ್ನ ವಾಕ್ಯವನ್ನು ಬದಲಾಯಿಸು ವುದಿಲ್ಲ. ಇದಕ್ಕಿಂತ ಹೆಚ್ಚಿನ ಸತ್ತ್ವಪರೀಕ್ಷಾಪ್ರಸಂಗವನ್ನು ಊಹಿಸುವುದಕ್ಕೂ ಸಾಧ್ಯವಿಲ್ಲ. ಎಲ್ಲಕ್ಕಿಂತಲೂ ಹೆಚ್ಚಾಗಿ, ರಾಕ್ಷಸನಂತೆ ಕ್ರೋಧಾವೇಶದಿಂದ ತುಂಬಿದ ಭೀಮನನ್ನೂ ಉಳಿದ ತಮ್ಮಂದಿರನ್ನೂ ಯಾವಾಗಲೂ ಹದ್ದು ಮೀರದಂತೆ ಇರಿಸಿಕೊಳ್ಳುವ ಅಧಿಕಾರ ಅವನಿಗೆ ಯಾವಾಗಲೂ ತಪ್ಪಲಿಲ್ಲ. ಅವನ ಕಟ್ಟಾಜ್ಞೆಯನ್ನು ಮೀರುವುದಕ್ಕೆ ಯಾರಿಗೂ ಆಗದಂತಿ ದ್ದನು. ತಾನು ರಾಜ್ಯವಾಳಿದ ಅಲ್ಪಾವಧಿಯಲ್ಲಿಯೇ ಜನರೆಲ್ಲರ ಮೆಚ್ಚುಗೆಗೂ ಪಾತ್ರನಾಗಿದ್ದನು. ಆದರೆ ಕೃಷ್ಣನಲ್ಲಿ ಅವನಿಗೆ ಅಚಲವಾದ ಭಕ್ತಿ. ಕೃಷ್ಣನ ವಾಕ್ಯವೆಂದರೆ ತನ್ನ ಮನಸ್ಸನ್ನು ಬದಿಗಿಟ್ಟು ಕೃಷ್ಣನ ಮಾತಿನಂತೆಯೇ ನಡೆಯುತ್ತಿದ್ದನು. ತನ್ನ ಭಾಗಕ್ಕೆ ಕೃಷ್ಣನೇ ದೇವರೆಂದು ನಂಬಿದ್ದನು. ಯುದ್ಧದಲ್ಲಿ ಜಯ ವಾದುದಕ್ಕೆ ಭೀಮನ ಬಾಹುಬಲ, ಅರ್ಜುನನ ಗಾಂಡೀವದ ಬಲಗಳಿಗಿಂತ ಹೆಚ್ಚಾಗಿ ಧರ್ಮರಾಯನ ಧರ್ಮಬಲವೇ ಮುಖ್ಯ ಕಾರಣವೆಂಬುದನ್ನು ವ್ಯಾಸರು ಪದೇ ಪದೇ ಸೂಚಿಸಿದ್ದಾರೆ. ಈ ಧರ್ಮಸಂಗ್ರಹದ ಪರಿಣಾಮವಾಗಿ ಅವನು ನಿಜವಾಗಿಯೂ

ಅಜಾತಶತ್ರು. ಯಾರ ಮನಸ್ಸನ್ನೂ ಎಂದೂ ನೋಯಿಸಿಯೇ ಕಾಣದ ಮಹಾತ್ಮ ಧರ್ಮರಾಜ. ಮಹಾಭಾರತ ಯುಗದ ಸಂಸ್ಕೃತಿಯ ಆದರ್ಶ ಪುರುಷನೇ ಧರ್ಮರಾಜನೆನ್ನಬಹುದು. ಅವನನ್ನು ಯಾರು ನಿಂದಿಸಿದರೂ, ಬೈದರೂ, ಕಡೆಗೆ ವಿರಾಟನಂತೆ ಹೊಡೆದರೂ ಕೋಪವೆಂಬುದಿಲ್ಲ. ಅಂತಹ ಸಂಯತಾತ್ಮ ಅವನು. ಬಲಾಧಿಕನಾದ ಶಲ್ಯನನ್ನು ಯುದ್ಧದಲ್ಲಿ ತೀರಿಸಲು ಮತ್ತೆ ಯಾರಿಗೂ ಆಗದೆ ಯುದಿಷ್ಠಿರನೇ ಬರಬೇಕಾಯಿತು. ಯುದ್ಧದಲ್ಲಿ ಅವನು ಪಾತ್ರವಹಿಸದೆ ಸುಮ್ಮನೆ ಪ್ರೇಕ್ಷಕನಾಗಿಯೇ ಇದ್ದವನಲ್ಲ. ಇಂತಹ ಸಾತ್ವಿಕ ಸ್ವಭಾವದ ನಾಯಕ ಪ್ರಪಂಚದ ಬೇರೆ ಸಾಹಿತ್ಯಗಳಲ್ಲಿ ದುರ್ಲಭ. ದುರ್ಯೋಧನನ ಊರುಭಂಗಕ್ಕಾಗಿಯೇ ಹುಟ್ಟಿದನೋ ಎಂಬಂತಹ ಸಾಹಸ ಭೀಮ, ಕೌರವ ಅತಿರಥ ಮಹಾರಥರನ್ನೆಲ್ಲ ಒಬ್ಬನೇ ಎದುರಿಸಬಲ್ಲ ಏಕಾಂಗವೀರ ಅರ್ಜುನ, ಗಾಂಧಾರಿ, ಶಕುನಿ, ಧೃತರಾಷ್ಟ್ರ ಮುಂತಾದವರ ಪಾತ್ರಗಳನ್ನು ವಿವರಿಸುವ ಕಾರಣವಿಲ್ಲ*

## ಉಪಾಖ್ಯಾನಗಳು

ಮಹಾಭಾರತದಲ್ಲಿ ಮೂಲಕಥೆಗೆ ಎಷ್ಟು ಪ್ರಾಶಸ್ತ್ಯವೋ ಅದಕ್ಕೆ ಕಡಿಮೆಯಲ್ಲದ ಮಹತ್ತ್ವವೇ ಅಲ್ಲಿರುವ ಉಪಾಖ್ಯಾನಗಳಿಗೂ ಉಂಟು. ನಾವು ಆಗಲೇ ನೋಡಿದಂತೆ ಉಪಾಖ್ಯಾನಗಳಲ್ಲಿ ಮುಖ್ಯವಾಗಿ ಎರಡು ಗುಂಪುಗಳನ್ನು ಮಾಡಬಹುದು. ಮೊದಲನೆಯದು ಬಹಳ ಹಿಂದಿನಿಂದಲೂ ಸೂತರ

---

* ಕುತೂಹಲಿಗಳು ಮಾಸ್ತಿ ವೆಂಕಟೇಶ ಅಯ್ಯಂಗಾರರ 'ಭಾರತ ತೀರ್ಥ' ವನ್ನು ಓದಿ.

ಬಾಯಿಂದ ಬಾಯಿಗೆ ಓಡಾಡುತ್ತಿದ್ದ ವೀರಗಾಥೆಗಳು. ನಳೋಪಾಖ್ಯಾನ, ಶಕುಂತಲೋಪಾಖ್ಯಾನ, ರಾಮೋಪಾಖ್ಯಾನ, ಯಯಾತಿಯ ಕಥೆ, ಮುಂತಾದ ರಾಜರ ಕಥೆಗಳೆಲ್ಲ ಈ ಮೊದಲನೆಯ ಗುಂಪಿನಲ್ಲಿ ಬರುತ್ತವೆ.* ಇವುಗಳೊಂದೊಂದರಲ್ಲೂ ಒಂದೊಂದು ಸ್ವತಂತ್ರ ಮಹಾಕಾವ್ಯದ ಯೋಗ್ಯತೆಯಿದೆ. ಮುಂದೆ ಇವನ್ನರಿತ ಭಾರತೀಯ ಮಹಾಕವಿಗಳು ಈ ಆಖ್ಯಾನಗಳನ್ನು ಆಧಾರವಾಗಿಟ್ಟುಕೊಂಡು ನಾಟಕ-ಮಹಾಕಾವ್ಯಾದಿಗಳನ್ನು ಬರೆದೂ ಇದ್ದಾರೆ. ನಳಕಥೆಯೊಂದನ್ನೇ ಕುರಿತು ೪೨ ಸಂಸ್ಕೃತ ಕೃತಿಗಳನ್ನೂ ೧೩ ಕನ್ನಡ ಕೃತಿಗಳನ್ನೂ ಚೌಂಡರಾಜನ ನಳಚಂಪೂಗ್ರಂಥದ ಸಂಪಾದಕರು ಪಟ್ಟಿಮಾಡಿದ್ದಾರೆ. ಪರ್ವತನದಿಯಂತೆ ವೇಗವಾಗಿ ಹರಿಯುವ ಭಾಷಾಪ್ರವಾಹ, ಕೃತ್ರಿಮ ಅಲಂಕಾರಗಳ ಅಭಾವ, ಛಂದಸ್ಸಿನ ಸರಲ ಓಟ, ಕಥೆಯ ಸ್ವಾರಸ್ಯ, ಪಾತ್ರಗಳ ಸುಂದರ ಚಿತ್ರಣ—ಇವು ಈ ಜಾತಿಯ ಉಪಾಖ್ಯಾನಗಳ ಸಾಮಾನ್ಯ ಗುಣಗಳು. ಋಷಿಗಳ ಮಾಹಾತ್ಮ್ಯವನ್ನೂ, ತಪಸ್ವಿಗಳ ನಿಗ್ರಹಾನುಗ್ರಹ ಸಾಮರ್ಥ್ಯವನ್ನೂ ಪ್ರದರ್ಶಿಸುವ ಉಪಾಖ್ಯಾನಗಳು ಎರಡನೆಯ ಗುಂಪಿಗೆ ಸೇರುತ್ತವೆ. ಇವನ್ನು ಬ್ರಾಹ್ಮಣ ಪುರೋಹಿತರ ಕೃತಿಗಳೆಂದರೂ ಸಲ್ಲುತ್ತದೆ. ವಿಶೇಷತಃ, ಭಾರ್ಗವ ಗೋತ್ರದ ಬ್ರಾಹ್ಮಣರೇ ಇವರಿರಬೇಕೆಂದು ವಿದ್ವಾಂಸರು ಊಹಿಸುತ್ತಾರೆ. ರುರು-ಪ್ರಮದ್ವರಾ, ಚ್ಯವನ-ಸುಕನ್ಯಾ, ಸಾವಿತ್ರೀ-ಸತ್ಯವಾನ್, ಋಷ್ಯಶೃಂಗ, ವಸಿಷ್ಠ-

---

*ಈ ಉಪಾಖ್ಯಾನಗಳನ್ನು ಪ್ರೊ। ಎ. ಆರ್. ಕೃಷ್ಣಶಾಸ್ತ್ರಿಗಳ ವಚನ ಭಾರತ, ಅನುಬಂಧದಲ್ಲಿ ನೋಡಿ.

ವಿಶ್ವಾಮಿತ್ರರು, ಮುಂತಾದವರ ಪ್ರಸಿದ್ಧ ಕಥೆಗಳೆಲ್ಲವೂ ಈ ಎರಡನೆಯ ಜಾತಿಯವು. ಇವುಗಳಲ್ಲದೆ ವೈದಿಕ ಸಾಹಿತ್ಯದ ದೇವತೆಗಳ, ಸರ್ಪ-ರಾಕ್ಷಸರ, ಮತ್ತು ಮೃಗ-ಪಕ್ಷಿಗಳ ಕಥೆಗಳೂ ಮಹಾಭಾರತದಲ್ಲಿ ಹೇರಳವಾಗಿವೆ.

## ನೀತಿಕಥೆಗಳು

ಉಪಾಖ್ಯಾನಗಳಲ್ಲದೆ, ಅಲ್ಲಲ್ಲೇ ಸಾಮತಿಗಾಗಿ ನಾವು 'ಪಂಚತಂತ್ರ' ದಲ್ಲಿ ನೋಡುವಂತಹ ಸಣ್ಣ ಕಥೆಗಳೂ ಮಹಾಭಾರತದಲ್ಲಿ ಉಂಟು. ಇದಕ್ಕೆ ಗೃಧ್ರ-ಗೋಮಾಯು-ಸಂವಾದವನ್ನು ಉದಾಹರಣೆಯಾಗಿ ಕೊಡಬಹುದು. ಒಮ್ಮೆ ಒಬ್ಬ ಬ್ರಾಹ್ಮಣನ ಗಂಡು ಮಗು, ಅವನಿಗಿದ್ದ ಒಂದೇ ಮಗು, ಸಾಯುತ್ತದೆ. ಅಳುತ್ತಾ ಕರೆಯುತ್ತಾ ಅವನ ಬಂಧುಗಳು ಶಿಶುವಿನ ಶವವನ್ನು ಉತ್ತರಕ್ರಿಯೆಗಾಗಿ ಶ್ಮಶಾನಕ್ಕೆ ತರುತ್ತಾರೆ. ದುಃಖಾವೇಗದಲ್ಲಿ ಮಗುವನ್ನು ಅಗಲುವುದು ಅವರಿಗೆ ಕಷ್ಟವಾಗಿ ಗೋಳಾಡುತ್ತಾರೆ. ಗೋಳಾಟವನ್ನು ಕೇಳಿ ಒಂದು ಹದ್ದು ಹಾರಿ ಬರುತ್ತದೆ. ಸತ್ತವರಿಗೆ ಅತ್ತು ಉಪಯೋಗವಿಲ್ಲವೆಂದು ವೈರಾಗ್ಯವನ್ನು ಬೋಧಿಸುತ್ತದೆ. ಕಾಲನ ಕೈಗೆ ಸಿಕ್ಕಿ ಪಾರಾದವನಾರೂ ಇಲ್ಲ. ಆದ್ದರಿಂದ ಬೇಗ ಮನೆಗೆ ಮರಳಿರೆಂದು ಸೂಚಿಸುತ್ತದೆ. ಜನರು ಮನೆಯ ಕಡೆ ಹೆಜ್ಜೆಯಿಡಲು ತೊಡಗುತ್ತಾರೆ. ಅಷ್ಟರಲ್ಲೇ ಒಂದು ನರಿ ಬಂದು ಅವರನ್ನು ನೋಡುತ್ತದೆ. 'ಅಯ್ಯೋ, ಇದೇನು? ನಿಮಗೆ ಕರುಣೆಯೇ ಇಲ್ಲವೆ? ಇಷ್ಟು ಬೇಗ ಇಂತಹ ಶಿಶುವನ್ನು ಹೀಗೆ ತೊರೆದು ಹೋಗುತ್ತಿರುವಿರಲ್ಲಾ!' ಎನ್ನುತ್ತದೆ. ಜನರು ಮತ್ತೆ ಶಿಶುವಿನತ್ತ ತಿರುಗುತ್ತಾರೆ. ಕಾಯುತ್ತಿದ್ದ ಹದ್ದು

ಮತ್ತೆ ಅವರ ಮೂರ್ಖತನವನ್ನು ತೋರಿಸುತ್ತದೆ. ಕರ್ಮಾನು ಸಾರವಾಗಿ ಎಲ್ಲರೂ ಸಾಯುವುದೇ! ಸಾವಿಗೆ ಅಳುವವ ರುಂಟೆ?' ಎಂದು ಬೋಧಿಸುತ್ತದೆ. ಮತ್ತೆ ಮನೆಯ ಕಡೆ ಹೋಗುವಾಗ ನರಿ ಅವರನ್ನು ತಡೆದು 'ಬದುಕಿದರೂ ಇನ್ನೂ ಬದುಕಬಹುದು, ಪ್ರಯತ್ನವನ್ನು ಬಿಡಬಾರದು' ಎನ್ನುತ್ತದೆ. ಹದ್ದು—'ನನಗೆ ಸಾವಿರ ವರ್ಷವಾಯಿತು. ಸತ್ತವರು ಬದು ಕಿದ್ದನ್ನು ನೋಡಲಿಲ್ಲ. ಸಾಯುವವರೆಗೆ ನಂಟರ ಕರ್ತವ್ಯವೇ ಹೊರತು, ಪೂರ್ತಿ ಸತ್ತ ಮೇಲೆ ಏನೂ ಇಲ್ಲ' ಎನ್ನುತ್ತದೆ. ಹೀಗೆ ಒಂದು ಕಡೆ ಹದ್ದು, ಇನ್ನೊಂದು ಕಡೆ ನರಿ, ಎರಡೂ ಜನರನ್ನು ಮತ್ತೂ ಮತ್ತೂ ಓಡಾಡಿಸುತ್ತವೆ. ವಸ್ತುತಃ ಎರಡರದೂ ಸ್ವಾರ್ಥವೇ. ಸೂರ್ಯ ಮುಳುಗುವ ಮೊದ ಲಾದರೆ ತನಗೇ ಎಲ್ಲ ಮಾಂಸವೂ ಸಿಕ್ಕುವುದೆಂದು ಹದ್ದಿನಾಸೆ. ಕತ್ತಲಾಗಿಬಿಟ್ಟರೆ ಹದ್ದಿಗೇನೂ ಇಲ್ಲದೆ ತನ್ನದೇ ಎಲ್ಲವೂ ಆಗು ವುದೆಂದು ನರಿಯಾಸೆ. ಇಷ್ಟರಲ್ಲಿ ಶಿವನೇ ಬಂದು ಮಗುವನ್ನು ಬದುಕಿಸಿ ಹೋಗುವನೆಂದು ಕಥೆ ಮುಗಿಯುತ್ತದೆ.

(ಶಾಂತಿಪರ್ವ)

## ಧರ್ಮಸೂಕ್ಷ್ಮಗಳು, ರಾಜನೀತಿ, ಇತ್ಯಾದಿ

ಮಹಾಭಾರತದಲ್ಲಿ ವಿದುರನೀತಿಗೂ, ಭೀಷ್ಮನು ಶಾಂತಿ ಪರ್ವದಲ್ಲಿ ಉಪದೇಶಿಸುವ ಧರ್ಮಸೂಕ್ಷ್ಮಗಳಿಗೂ ಹೆಚ್ಚಿನ ಸ್ಥಾನವಿದೆ. ವಿವೇಕಿ ಯಾರು, ಅವಿವೇಕಿ ಯಾರು ಎಂಬುದನ್ನು ಬಹು ಸೂಕ್ಷ್ಮವಾಗಿ ವಿಮರ್ಶಿಸಿ ವಿದುರನು ಧೃತರಾಷ್ಟ್ರನಿಗೆ ಉದ್ಯೋಗಪರ್ವದಲ್ಲಿ ಬುದ್ಧಿವಾದ ಹೇಳುತ್ತಾನೆ. ಭೀಷ್ಮನಂತೂ ವಿವೇಚಿಸದ ರಾಜಧರ್ಮ, ಆಪದ್ಧರ್ಮ, ಮೋಕ್ಷಧರ್ಮ

ಯಾವುದೂ ಉಳಿದಿಲ್ಲವೆನ್ನಬಹುದು. ಇವುಗಳನ್ನು ಸಂಗ್ರಹಿಸುವುದಕ್ಕೆ ಇಲ್ಲಿ ಸ್ಥಳಾವಕಾಶವಿಲ್ಲ. ಮಹಾಭಾರತದಲ್ಲಿ ಬರುವ ಈ ನೀತಿಬೋಧೆ ಭಾರತದ ಮತ್ತಾವ ಗ್ರಂಥದಲ್ಲಿಯೂ ಇಷ್ಟು ಸುಸ್ಪಷ್ಟವಾಗಿಯೂ, ಸರ್ವಕಾಲಗ್ರಾಹ್ಯವಾಗಿಯೂ ಬರುವುದಿಲ್ಲವೆಂದು ಹೇಳಬಹುದಾಗಿದೆ. ಪ್ರತಿಯೊಂದು ವಿಚಾರಕ್ಕೂ ಒಂದು ಹೃದಯಂಗಮವಾದ ಕಥೆಯನ್ನೋ ದೃಷ್ಟಾಂತವನ್ನೋ ಕೊಟ್ಟು ವಿವರಿಸುವುದು ಈ ಭಾಗದ ವೈಶಿಷ್ಟ್ಯ.

## ಮಹಾಭಾರತದ ಶೈಲಿ

ಇಡಿಯ ಮಹಾಭಾರತವನ್ನು ಲಕ್ಷ್ಯದಲ್ಲಿಟ್ಟರೆ ಅದರ ರಸ ಶಾಂತರಸವೆಂಬ ವಿಷಯವನ್ನು ಆಗಲೇ ಹೇಳಿದೆವು. ಆದರೆ ಕೇವಲ ಯುದ್ಧಪರ್ವಗಳನ್ನು ಗಮನಿಸಿದರೆ ವೀರ ರೌದ್ರಾದಿ ರಸಗಳು ಮಾತ್ರ ವ್ಯಕ್ತವಾಗುತ್ತವೆ. ಉಪಾಖ್ಯಾನಗಳಲ್ಲಿ ಗೋಳಿನ ಪ್ರಸಂಗಗಳಲ್ಲಿ ಕರುಣರಸದಂತೆ, ಪ್ರೇಮಪ್ರಸಂಗಗಳಲ್ಲಿ ಶೃಂಗಾರವೂ, ಋಷ್ಯಶೃಂಗೋಪಾಖ್ಯಾನವೇ ಮುಂತಾದುವಲ್ಲಿ ಹಾಸ್ಯರಸವೂ, ವಿಶ್ವರೂಪದರ್ಶನ ಮುಂತಾದ ವರ್ಣನೆಗಳಲ್ಲಿ ಅದ್ಭುತರಸ—ಹೀಗೆ ನವರಸಗಳನ್ನೂ ಸ್ಪಷ್ಟವಾಗಿ ಗುರುತಿಸಬಹುದು. ಭಾರತ, ಕಬ್ಬು, ಚಂದ್ರ—ಮೂರೂ 'ಪ್ರತಿಪರ್ವರಸೋದಯ'ಗಳು ಎಂದು ಒಂದು ಸುಭಾಷಿತವಿದೆ. ಕಬ್ಬಿನಲ್ಲಿ ಗೆಣ್ಣಿನಿಂದ ಗೆಣ್ಣಿಗೆ ಸಿಹಿ ಹೊಸದಾಗುತ್ತದೆ; ಪ್ರತಿ ಹುಣ್ಣಿಮೆಯಲ್ಲೂ ಚಂದ್ರಿಕಾರಸ ಉಕ್ಕುತ್ತದೆ. ಭಾರತದ ಪ್ರತಿ ಪರ್ವದಲ್ಲಿಯೂ ರಸ ಹೊಸದಾಗಿಯೇ ಚಿಮ್ಮುತ್ತಿರುತ್ತದೆ.

ವ್ಯಾಸರ ವಾಕ್ಪ್ರವಾಹ ಒಂದು ತಿಳಿನೀರಿನ ಚಿಲುಮೆಯಂತೆ. ಅದರ ವೇಗ, ಗಾತ್ರ, ತಂಪು, ಯಾವಾಗಲೂ ಒಂದೇ ಸಮ,

ಯುದ್ಧ ವರ್ಣನಾ ಭಾಗದ ಶೈಲಿಯಲ್ಲಿ ಕೂಡ ಧರ್ಮ ವಿವೇಚನಾ ಭಾಗದಲ್ಲಿ ಕಂಡುಬರುವ ಪ್ರಸನ್ನತೆ, ಶಾಂತಿಗಳು ತಪ್ಪುವುದಿಲ್ಲ. ಕಥೆಯ ವಿವರಗಳಿಗೆ, ಘಟನೆಗಳ ನಿರೂಪಣೆಗೆ, ಇಲ್ಲಿ ವರ್ಣನೆಗಿಂತ ಹೆಚ್ಚಿನ ಪ್ರಾಶಸ್ತ್ಯವುಂಟು. ಆದ್ದರಿಂದ ವ್ಯಾಸರ ಶೈಲಿ ವಾರ್ತಾವಾಹಕರ ಶೈಲಿಯೆನ್ನಬಹುದು. ಇಲ್ಲಿ ಶಬ್ದಸೌಷ್ಠವಕ್ಕಿಂತಲೂ ಅರ್ಥಗೌರವವೇ ಗಮನಾರ್ಹ. ಎಷ್ಟೋ ವೇಳೆ ಅಪಾಣಿನೀಯ ಪ್ರಯೋಗಗಳೂ ಬರುತ್ತವೆ. ಭಾಷೆಯಲ್ಲಿ ಆಡುನುಡಿಯ ಸಹಜತೆ ಸಂಪೂರ್ಣವಾಗಿ ಮೈಗೂಡಿದೆ; ಅದರ ಏರುಪೇರುಗಳೂ ಇದ್ದೇ ಇವೆ. ಉಜ್ಜಿ ನಯಮಾಡಿ, ತಳತಳನೆ ಬೆಳಗಿಸುವ ಪ್ರಯತ್ನವೆಲ್ಲೂ ಇಲ್ಲ. ಇದರ ಪದ್ಯಬಂಧ ಅನುಷ್ಟುಭ್ ಮತ್ತು ತ್ರಿಷ್ಟುಭ್ ಛಂದಸ್ಸುಗಳಿಂದ ಪ್ರಚುರವಾದ ಆರ್ಷ ಛಂದಸ್ಸು. ಇಷ್ಟಾದರೂ ಪುರಾಣಗಳ ಶೈಲಿಯಂತೆ ಮಹಾಭಾರತದ ಶೈಲಿಯಲ್ಲೂ ಅತಿನೀರಸವಾಗದಿರುವುದಕ್ಕೆ ಅದರ ಜೀವನವಿಮರ್ಶೆ ಮುಖ್ಯ ಕಾರಣ.

ಮಹಾಭಾರತವನ್ನು ಕಾವ್ಯವೆನ್ನಬಹುದೆ? ಎಂದು ಇಂದಿನವರು ಕೇಳುವಂತಾಗಿದೆ. ಆದರೆ ಈ ಬಗೆಯ ಕಾವ್ಯ ಇದೊಂದೇ; ಇದು ಅನನ್ಯವಿಲಕ್ಷಣವಾದುದೆಂದು ಭಾರತದಲ್ಲೇ ಹೇಳಿದೆ. ವ್ಯಾಸರು ಬ್ರಹ್ಮನಿಗೆ ಹೇಳಿದರಂತೆ:—'ನಾನೊಂದು ಪರಮ ಪೂಜಿತವಾದ ಕಾವ್ಯವನ್ನು ಬರೆದಿದ್ದೇನೆ. ವೇದ, ವೇದಾಂಗ, ಉಪನಿಷತ್ತುಗಳ ರಹಸ್ಯ, ಇತಿಹಾಸಪುರಾಣಗಳ ವಸ್ತು, ಧರ್ಮಗಳ ವಿವರಣೆ, ನ್ಯಾಯಾದಿ ಶಾಸ್ತ್ರಗಳ ಸಾರ, ನದಿ, ಪರ್ವತ, ಸಾಗರ, ವನ, ಮುಂತಾದುವುಗಳ ವರ್ಣನೆ, ವಾಕ್ಯವಿಶೇಷಗಳು, ಲೋಕಯಾತ್ರೆಯ ಕ್ರಮ—ಎಲ್ಲವೂ ಇದರಲ್ಲಿಯೇ ಅಡಕವಾಗಿದೆ' ಎಂದು. (I. i. 61-70) ಆಗ

ಬ್ರಹ್ಮನು ವರವಿತ್ತನಂತೆ: 'ಈ ಕಾವ್ಯವನ್ನು ಮಿಕ್ಕ ಕವಿಗಳಾರೂ ಮೀರಿಸಲಾರರು' ಎಂಬುದಾಗಿ. ಅದು ನಿಜವೆಂಬುದನ್ನು ಇಡಿಯ ಭರತಖಂಡದ ಕಾವ್ಯರಾಶಿಯೇ ಪ್ರಮಾಣಿಸುತ್ತದೆ.

ವ್ಯಾಸರ ಚಿರಸ್ಮರಣೀಯ ಶೈಲಿಗೆ ಒಂದೆರಡು ಉದಾಹರಣೆಗಳನ್ನು ನೋಡಿ:—

೧. ಅತಿಕ್ರಾಂತಸುಖಾಃ ಕಾಲಾಃ
ಪ್ರತ್ಯುಪಸ್ಥಿತದಾರುಣಾಃ|
ಶ್ವಃ ಶ್ವಃ ಪಾಪೀಯದಿವಸಾಃ
ಪೃಥಿವೀ ಗತಯೌವನಾ ||

(ಆದಿಪರ್ವ, 128. 6)

[ದಿನಗಳ ಸುಖವೆಲ್ಲ ಎಂದೋ ಕಳೆದುಹೋಯಿತು; ಬರುಬರುತ್ತಾ ಮತ್ತೂ ದುಃಖಮಯವಾಗುತ್ತವೆ. ನಾಳೆಗಿಂತ ನಾಡಿದ್ದು ಮತ್ತೂ ಕೇಡೆನ್ನುವಂತಿದೆ. ಪೃಥಿವಿಯ ಯೌವನವೇ ಕಳೆದಾಗಿದೆ!]

ಇದು ಮಹಾಭಾರತದ ಆದಿಯಲ್ಲಿ ವ್ಯಾಸರೇ ಬರಲಿರುವ ಕಾಲದ ಸ್ವರೂಪವನ್ನೂ ಕುರಿತು ಸತ್ಯವತಿಗೆ ಹೇಳುವ ಮಾತು. ಹೀಗೆ ಹೇಳಿ ಆಕೆಯನ್ನು ಮೊದಲೇ ವನವಾಸಕ್ಕೆ ಕಳಿಸಿಬಿಡುತ್ತಾರೆ. ಮಹಾಭಾರತದ ಸಾರವನ್ನೆಲ್ಲ ಈ ಒಂದೇ ಪದ್ಯ ಸೂಚಿಸುವಂತಿದೆ.

೨. ಯಸ್ಯ ನಾಸ್ತಿ ನಿಜಾ ಪ್ರಜ್ಞಾ
ಕೇವಲಂ ಯೋ ಬಹುಶ್ರುತಃ|
ನ ಸ ಜಾನಾತಿ ಶಾಸ್ತ್ರಾರ್ಥಂ
ದರ್ವೀ ಸೂಪರಸಾನಿವ ||

(ಸಭಾಪರ್ವ, 55-1)

[ಸುಮ್ಮನೆ ಬಹಳವಾಗಿ ಓದಿದ್ದರೂ ಯಾರಿಗೆ ಸ್ವಂತ ಬುದ್ಧಿಯಿಲ್ಲವೋ ಅವನು ಶಾಸ್ತ್ರಾರ್ಥವನ್ನು ತಿಳಿಯಲಾರ; ಸೌಟಿಗೆ ಅಡಿಗೆಯ ರುಚಿ ಹೇಗೆ ತಿಳಿದೀತು!]

ಇದು ವ್ಯಾಸರ ಸಾವಿರಾರು ಸುಭಾಷಿತಗಳಲ್ಲೊಂದು.

ಇದು ಶಲ್ಯನು ಯುದ್ಧರಂಗದಲ್ಲಿ ಬೀಳುವಾಗ ಕವಿಗೆ ಕಾಣುವ ಚಿತ್ರ—

೩. ಸ ತಥಾ ಭಿನ್ನ ಸರ್ವಾಂಗೋ
ರುಧಿರೇಣ ಸಮುಕ್ಷಿತಃ ।
ಪ್ರತ್ಯುದ್ಗತ ಇವ ಪ್ರೇಮ್ಣಾ
ಭೂಮ್ಯಾ ಸ ನರಪುಂಗವಃ ॥

(ಶಲ್ಯಪರ್ವ, 17-55)

[ರಕ್ತದಲ್ಲಿ ಅದ್ದಿ ಆ ಭೂಪಾಲನ ಅಂಗವೆಲ್ಲಾ ಕೆಂಪಾಗಿದ್ದರೆ, ಪ್ರಿಯೆಯಾದ ಭೂಮಿ ಬಂದು ಪ್ರೀತಿಯಿಂದ ಸ್ವಾಗತಿಸುವಂತೆ ಕಂಡಳು!]

ಹೀಗೆ ವ್ಯಾಸರ ಶೈಲಿಯಲ್ಲಿ ಉತ್ಪ್ರೇಕ್ಷಾದಿ ಅಲಂಕಾರಗಳೂ ಅಲ್ಲಲ್ಲಿ ಮಿಂಚಿ ಮಾಯವಾಗುವುದುಂಟು. ಮಹಾಕವಿ ಬಾಣನು ವ್ಯಾಸರಿಗೆ ಸಲ್ಲಿಸುವ ಗೌರವ ಅತಿಶಯೋಕ್ತಿಯಲ್ಲ:—ಬ್ರಹ್ಮನು ಭಾರತ ವರ್ಷದಲ್ಲಿ ಸರಸ್ವತೀ ನದಿಯನ್ನು ಸೃಷ್ಟಿಸಿ ಅದನ್ನು ಪಾವನಗೊಳಿಸಿದನು; ಈ ಕವಿಬ್ರಹ್ಮನು "ಭಾರತ" ದಲ್ಲಿ ತನ್ನ ಸರಸ್ವತಿಯನ್ನು ಹರಿಯಿಸಿ ಅದನ್ನು ಮತ್ತೂ ಪಾವನಗೊಳಿಸಿದನು:—

ನಮಸ್ಸರ್ವವಿದೇ ತಸ್ಮೈ ವ್ಯಾಸಾಯ ಕವಿವೇಧಸೇ ।
ಚಕ್ರೇ ಪುಣ್ಯಂ ಸರಸ್ವತ್ಯಾ ಯೋ ವರ್ಷಮಿವ ಭಾರತಮ್ ॥

111436

## ಮಹಾಭಾರತದ ಸಂದೇಶ

ಮಹಾಭಾರತದ ಸಂದೇಶ ಕಾಲದೇಶಗಳಿಂದ ಸೀಮಿತವಾದುದಲ್ಲ; ಸದಾಕಾಲವೂ ಮಾನವಕೋಟಿಯನ್ನುದ್ಧರಿಸಬಲ್ಲ ಸಂಜೀವನ ಮಂತ್ರವೇ ಅಲ್ಲಿ 'ಧರ್ಮ' ಎಂಬೆರಡಕ್ಷರಗಳಿಂದ ಉಚ್ಚರಿತವಾಗಿದೆ; ಸಾವಿರಾರು ಸಲ ಪುನರುಚ್ಚರಿತವಾಗಿದೆ; ಪಾತ್ರಗಳ ಜೀವನದಲ್ಲಿ ಪ್ರಕಟಿತವಾಗಿದೆ. ಮನುಷ್ಯನ ಪುರುಷಾರ್ಥಗಳು ಮೂರಾದರೂ—ಧರ್ಮ, ಅರ್ಥ, ಕಾಮ—ಧರ್ಮವಿವರ್ಜಿತವಾದ ಅರ್ಥಕಾಮಗಳು ಹೇಯ; ಉಪಾದೇಯವೇ ಅಲ್ಲ. ಆದ್ದರಿಂದ ಸಕಲಕ್ಕೂ ಧರ್ಮವೇ ಮೂಲ. ಧರ್ಮವೆಂದರೆ ಲೋಕಯಾತ್ರೆಯು ಎಲ್ಲರಿಗೂ ಸುಗಮವಾಗುವಂತೆ ಸಮಾಜವು ಒಪ್ಪಿಕೊಳ್ಳಬೇಕಾದ ಮೂಲಭೂತ ಕಟ್ಟಳೆಗಳು. ಪರಾರ್ಥಪ್ರಧಾನವಾದುದು ಧರ್ಮ; ಸ್ವಾರ್ಥಮಾತ್ರ ಸಂಪಾದಕವಾದುದು ಅಧರ್ಮ. ಜನ್ಮ, ಗುಣ, ಕೆಲಸ, ಅವಸ್ಥೆಗಳನ್ನನುಸರಿಸಿ ಧರ್ಮಗಳ ಸ್ವರೂಪ ನಿರ್ಣಯವಾಗಬೇಕು. ಸತ್ಯ, ಅಹಿಂಸೆ ಮುಂತಾದುವು ಸಾಧಾರಣ ಧರ್ಮಗಳೇ ಆದರೂ ಅನಿವಾರ್ಯ. ಯುದ್ಧದಲ್ಲಿ ಹಿಮ್ಮೆಟ್ಟದೆ ಹೋರಾಡುವುದು ಸೇನಾಪತಿಯ ವಿಶಿಷ್ಟ ಧರ್ಮವಾಗುತ್ತದೆ. ಯಾವುದೇ ಕಾಲದಲ್ಲಿ ಧರ್ಮಸಂದೇಹ ಬಂದರೂ ಅದರ ಪರಿಹಾರಕ್ಕೆ ಒಂದೇ ಸುಲಭ ಮಾರ್ಗವಿದೆ. ಯಾವುದರಿಂದ ಪರೋಪಕಾರವಾಗುವುದೋ ಅದು ಪುಣ್ಯಕರ; ಯಾವುದರಿಂದ ಪರಪೀಡೆಯಾಗುವುದೋ ಅದು ಪಾಪಕರ. ಕ್ಷಮೆ, ತ್ಯಾಗಗಳು ಧಾರ್ಮಿಕನ ಮುಖ್ಯ ಅಂಗಗಳು. ಧರ್ಮವೆಂದರೆ ದುರ್ಬಲನ ವೇಷವಲ್ಲ; ಅತುಲಬಲನ ಆತ್ಮಸಂಯಮ. ಕಾಮಕ್ರೋಧಾದಿ ಷಡ್ರಿಪುಗಳು ಮನುಷ್ಯನಿಗೆ ಬಾಹ್ಯಶತ್ರು

ಗಳಿಗಿಂತ ಹೆಚ್ಚಿನ ಅಂತಶ್ಶತ್ರುಗಳು. ವ್ಯಕ್ತಿಯ ಸುಧಾರಣೆಯಂತೆಯೇ, ಸಮಾಜದ ಉನ್ನತಿ, ರಾಷ್ಟ್ರದ ಕ್ಷೇಮ, ವಿಶ್ವ ಕಲ್ಯಾಣ ಎಲ್ಲವನ್ನೂ ಪ್ರಯತ್ನ ಪೂರ್ವಕವಾಗಿ ಸಾಧಿಸುವುದು ರಾಜನಂತೆ ಪ್ರಜೆಗಳ ಕರ್ತವ್ಯವೂ ಆಗಬೇಕು. ಇದು ಮಹಾಭಾರತದ ಮುಖ್ಯ ಸಂದೇಶ.

ಮಹಾಭಾರತದ ಯುದ್ಧಪರ್ವಗಳಲ್ಲಿ ಬರುವ ಶಸ್ತ್ರಾಸ್ತ್ರ ವರ್ಣನೆಗಳನ್ನೂ, ಐಷೀಕಾಸ್ತ್ರ, ನಾರಾಯಣಾಸ್ತ್ರ, ಪಾಶುಪತಾಸ್ತ್ರ, ಮುಂತಾದುವುಗಳ ಸುಸ್ಪಷ್ಟ ಉಲ್ಲೇಖಗಳನ್ನೂ ನೋಡಿದರೆ ಎಲ್ಲವೂ ಕವಿಯ ಕನಸುಗಳೆಂದು ವಾಚಕರಿಗೆ ತೋರುವುದಿಲ್ಲ. ಅದೃಷ್ಟಪೂರ್ವವಾದ ದಿವ್ಯಾಸ್ತ್ರಗಳ ಅಷ್ಟು ನಿಷ್ಕೃಷ್ಟ ವರ್ಣನೆ ಮನುಷ್ಯ ಬುದ್ಧಿಗೆ ಅಸಂಭವವೆನಿಸುತ್ತದೆ. ಇಂದಿನ ಅಣುಸ್ಫೋಟಕಾದಿ ಪ್ರಯೋಗಗಳ ವಿಷಯವನ್ನು ಕೇಳಿ ತಿಳಿಯುತ್ತಿರುವ ನಮಗೆ ಪೂರ್ವ ಯುಗದಲ್ಲೂ ಬೇರೊಂದು ರೀತಿಯಿಂದ ಇಂಥ ವಿಶ್ವಮಾರಣಾಸ್ತ್ರಗಳು ಕ್ಷತ್ರಿಯರಲ್ಲಿದ್ದುವೆಂದೂ, ಮಾನವನು ಕಲಿತ ಪಾಠದಿಂದ ಲುಪ್ತವಾದುವೆಂದೂ ಊಹಿಸುವುದು ಅಸಾಧ್ಯವಲ್ಲ. ಇಂದು ಮತ್ತೆ ಆ ಅಸ್ತ್ರಗಳು ವಿಶ್ವವನ್ನೇ ಅಂಜಿಸುತ್ತಿರುವಾಗ ಶಾಂತಿ ಪರ್ವದ ಸಂದೇಶವೂ, ಭಗವದ್ಗೀತೆಯ ಉಪದೇಶವೂ ಎಷ್ಟು ಅಗತ್ಯವಾಗಿದೆಯೆಂಬುದನ್ನು ಬಾಯಿಬಿಟ್ಟು ಹೇಳಬೇಕಾಗಿಲ್ಲ. ರಣರಂಗದಲ್ಲಿ ಆರಂಭವಾಗುವುದಕ್ಕೂ ಮೊದಲು ಮನುಷ್ಯರ ಮಾನಸದಲ್ಲಿಯೇ ಯುದ್ಧವಾರಂಭವಾಗುವುದನ್ನು ಈಗಿನ ಮಾನವತೆ ಅರಿಯತೊಡಗುತ್ತಿದೆ. ಮಹಾಭಾರತದ ಸಂದೇಶದ ಔಚಿತ್ಯ ಇಂದಿನ ಯುಗಕ್ಕೆ ಅತ್ಯಂತ ಅಗತ್ಯವಾಗಿದೆ. ಮಹಾಭಾರತದ ಯೋಧರಲ್ಲಿ ಅಷ್ಟೊಂದು ದಿವ್ಯಾಸ್ತ್ರಗಳಿದ್ದರೂ

ರಣರಂಗಕ್ಕೆ ಹೋಗದ ಸಾಮಾನ್ಯ ಪ್ರಜೆಗಳು ಸಾಮಾನ್ಯವಾಗಿ ಕ್ಷೇಮದಿಂದಿರುತ್ತಿದ್ದರು. ಒಬ್ಬೊಬ್ಬ ನಾಯಕನ ಶೌರ್ಯ ಸಾಹಸಗಳಿಗೂ ರಣರಂಗದಲ್ಲಿ ಅಂದು ಸ್ಥಾನವಿದ್ದಿತು, ಮಹತ್ತ್ವವಿದ್ದಿತು. ಈಗ ವೈಯಕ್ತಿಕ ರಣಧೀರರ ಕಾಲ ಹೋಗಿ ಸಾಮೂಹಿಕ ವಿನಾಶದ ಶಸ್ತ್ರಗಳೇ ಶೋಧವಾಗುತ್ತಿರುವುದು ವಿಶ್ವದ ಭೀತಿಯನ್ನು ಮತ್ತೂ ಹೆಚ್ಚಿಸುವಂತಾಗಿದೆ.

ಮಹಾಭಾರತದಲ್ಲಿ ಹಾಸುಹೊಕ್ಕಾಗಿ ಬರುವ ಧರ್ಮಬೋಧೆ ಬರಿಯ ಪರೋಪದೇಶದಲ್ಲಿ ಪರ್ಯವಸನ್ನವಾಗದೆ, ಆಚರಣೆಯಲ್ಲಿ, ಅನುಷ್ಠಾನದಲ್ಲಿ ಬಂದಿಳಿಯಬೇಕಾದರೆ, ಅತ್ಯಗತ್ಯವಾದ ಒಂದು ಅಂಶವಿದೆ. ಅದನ್ನೂ ಮಹಾಭಾರತದಲ್ಲಿ ಲೆಕ್ಕವಿಲ್ಲದಷ್ಟು ಸಲ ಪ್ರಸ್ತಾಪಿಸಲಾಗಿದೆ. ಅದೇ 'ಕರ್ಮ' ಮತ್ತು 'ಲೋಕಾಂತರ', 'ಜನ್ಮಾಂತರಗಳಲ್ಲಿ ನಂಬಿಕೆ. ಇಹಜನ್ಮದ ಹಿಂದೆ ಕಾಣೆವು; ಮುಂದೆ ಕಾಣಿಸದು. ಕಾಣಿಸುವಷ್ಟೇ ನಿಜವಾಗುವುದಾದರೆ ಐಹಿಕ ಸುಖಕ್ಕೊಂದಕ್ಕೇ ಸ್ಥಾನ. ನಿಸರ್ಗನಿಯಮವೆಂದು ಭಾರತ ತಿಳಿಯುವ ಧರ್ಮಕ್ಕೆ ನೆಲೆಯಾಗಲಿ, ಬೆಲೆಯಾಗಲಿ, ಉಳಿಯುವುದು ಕಷ್ಟ. ಆದ್ದರಿಂದಲೇ ಪೂರ್ವಜನ್ಮಗಳಲ್ಲಿ ಮಾಡಿದ ಪುಣ್ಯಪಾಪಗಳೇ ನಮ್ಮ ಇಂದಿನ ಜನ್ಮಕ್ಕೆ ಕಾರಣಗಳೆಂದೂ ಐಹಿಕ ಸುಕೃತದುಷ್ಕೃತಗಳೇ ನಮ್ಮ ಮುಂದಿನ ಸದ್ಗತಿ-ದುರ್ಗತಿಕಾರಕಗಳೆಂದೂ ತಿಳಿಯುವುದು ಧರ್ಮಾಚರಣೆಗೆ ಅವಶ್ಯವಾಗುತ್ತದೆ. ಇದೆಲ್ಲವೂ 'ಅದೃಷ್ಟ', ಕಾಣಿಸದಿರುವ ಅಂಶ; ಆದರೆ ತ್ರಿಕಾಲಜ್ಞಾನಿಗಳಾದ ಋಷಿಗಳಿಗೆ ಅದೂ ದೃಷ್ಟವೇ. ಕರ್ಮವಾದದಿಂದ ನಿಷ್ಕ್ರಿಯತೆ ಹೆಚ್ಚಿ, ಪುರುಷಯತ್ನ ಕುಂಠಿತವಾಗುವುದೆಂದು ಆಕ್ಷೇಪಿಸುವವರೂ ಉಂಟು. ಇದು ಸರಿಯಲ್ಲ. ಯಾವುವನ್ನು ಇಂದು ಅದೃಷ್ಟವೆನ್ನು

ತ್ತೇವೋ, ಅದೇ ಪೂರ್ವಜನ್ಮದ ಪುರುಷಕಾರವಾಗಿತ್ತೆಂಬುದನ್ನು ಮರೆಯಬಾರದು. ಇಂದಿನ ಪುರುಷಕಾರವೇ ಮುಂದಿನ ಜನ್ಮಕ್ಕೆ ಅದೃಷ್ಟವಾಗಿ ಫಲಿಸುವುದು. ಈ ನಂಬಿಕೆಗಳು ಇಂದಿಗೂ ಭಾರತ ಜನತೆಯಲ್ಲಿ ಬೇರೂರಿವೆ. ಅದಕ್ಕೆ ಮಹಾಭಾರತದ ಪ್ರಭಾವವೇ ಕಿರಣವೆಂಬುದನ್ನು ಮರೆಯಬಾರದು. ನೂರು ಉಪನಿಷತ್ತುಗಳೂ, ಚತುರ್ವೇದಗಳೂ ಸಾಧಿಸಲಾರದಷ್ಟು ಜ್ಞಾನಪ್ರಸಾರವನ್ನು, ಸದಾಚಾರಪ್ರವೃತ್ತಿಯ ಪ್ರಚಾರವನ್ನು ಮಹಾಭಾರತ ಎರಡುಸಾವಿರ ವರ್ಷಗಳಿಂದಲೂ ಮಾಡಿದೆ. ಸ್ವತಂತ್ರ ಭಾರತದಲ್ಲಿಯೂ ಮಾಡಲಾರದೇಕೆ?

ಮಾಸ್ತಿ ವೆಂಕಟೇಶ ಐಯಂಗಾರರು ಸುಂದರವಾಗಿ ಹೇಳಿರುವಂತೆ—". . . ಅಸಂಖ್ಯಾತ ಮಹಾಪುರುಷ ತಪಸ್ವಿ ಋಷಿಗಳ ಶಾಸನ ಆಶೀರ್ವಚನ ಶುಭಾಶಯವನ್ನು ಒಳಗೊಂಡ ಭಾರತ ಗ್ರಂಥ, ಅವರ ತಪಸ್ಸು ಜ್ಞಾನ ಧರ್ಮನಿಷ್ಠೆ ಸತ್ಯಸಂಕಲ್ಪ ಮಡುಗೂಡಿ ನಿಂತಿರುವ ಮಾನಸಸರೋವರ, ಪಾವನ ತೀರ್ಥ. ಪೂರ್ವಿಕರೊಬ್ಬರು "ಯೋ ಭಾರತಂ ಸಮಧಿಗಚ್ಛತಿ ವಾಚ್ಯಮಾನಂ ಕಿಂ ತಸ್ಯ ಪುಷ್ಕರಜಲೈಃ ಅಭಿಷೇಚನೇನ" ಎಂದರು. ಭಾರತಗ್ರಂಥ ಪುಷ್ಕರಕ್ಕಿಂತ ಮಿಗಿಲಾದ ಪುಣ್ಯತೀರ್ಥ ಎಂಬ ಈ ಭಾವನೆ ಯಾವ ಕಾಲಕ್ಕೂ ಒಪ್ಪತಕ್ಕದ್ದು. ಮನುಜ ಕುಲವೇ ಈ ತೀರ್ಥದಲ್ಲಿ ಸ್ನಾನಮಾಡಿ ಉದ್ಧಾರವಾಗಬಹುದು. 'ಸ್ನಾತವ್ಯಂ ಭಾರತೇ ತೀರ್ಥೇ'".

## ಭಗವದ್ಗೀತೆಯ ಮಹತ್ತ್ವ

ಉಪನಿಷತ್ತುಗಳೆಲ್ಲವುಗಳ ಸಾರಸರ್ವಸ್ವವೆಂದು, ಕೃಷ್ಣನೇ ಕಡೆದ ಬೆಣ್ಣೆಯೆಂದು, ವೇದಾಂತ ಪ್ರಸ್ಥಾನದ ಆಧಾರಗ್ರಂಥ

ಗಳಲ್ಲೊಂದೆಂದು, ಭಗವಂತನೇ ಲೋಕೋದ್ಧಾರಕ್ಕಾಗಿ ಮಾಡಿದ ದಿವ್ಯೋಪದೇಶವೆಂದು, ಭಾರತದ ಮತಾಚಾರ್ಯರೂ ಆಸ್ತಿಕರೂ ಎಂದಿನಿಂದಲೂ ಗೀತೆಯನ್ನು ಗೌರವಿಸುತ್ತ ಬಂದಿದ್ದಾರೆ. ಅದರ ಸಂದೇಶಕ್ಕೆ ಮುಗ್ಧನಾಗದ ಪಂಡಿತನಿಲ್ಲ; ಅದರ ಉಪದೇಶಕ್ಕೆ ಮನಸೋಲದ ವಿದೇಶೀಯನೂ ಇಲ್ಲ. 'ಒಂದು ಗೀತೆಯನ್ನೋದಿದರಾಯಿತು; ಸುಮ್ಮನೆ ನೂರೆಂಟು ಶಾಸ್ತ್ರಗಳಿಂದೇನು?' (ಗೀತಾ ಸುಗೀತಾ ಕರ್ತವ್ಯಾ ಕಿಮನ್ಯೈಃ ಶಾಸ್ತ್ರವಿಸ್ತರೈಃ) ಎಂದು ಪ್ರಾಚೀನರೆಂದರೆ ಇಂದಿನ ಗಾಂಧೀಜಿಯವರು 'ಗೀತೆಯೇ ನನ್ನ ಮಾತೆ'ಯೆಂದು ಸಾರಿದ್ದಾರೆ. ಗೀತೆಗೆ ಭಾರತದಲ್ಲಿಯೇ ಬರೆದಿರುವ ಟೀಕೆ ಟಿಪ್ಪಣಿಗಳಿಗೆ, ಭಾಷ್ಯವ್ಯಾಖ್ಯಾನಗಳಿಗೆ, ಲೆಕ್ಕವಿಲ್ಲ. ಗೀತೆಯ ವಿಷಯವಾಗಿ ಅನೇಕ ಭಾಷೆಗಳಲ್ಲಿ ಬಂದಿರುವ ಪುಸ್ತಕಗಳನ್ನೆಲ್ಲ ಕಲೆಹಾಕಿದರೆ ಅದೇ ಒಂದು ದೊಡ್ಡ ಗ್ರಂಥಾಲಯವಾದೀತು. ಗೀತೆಯ ವಿಷಯವಾಗಿ ಎರಡು ಮಾತನ್ನೂ ಆಡದಿದ್ದರೆ ಮಹಾಭಾರತದ ಪರಿಚಯಮಾಡಿಕೊಡುವ ಕೆಲಸ ನಿಷ್ಫಲವೇ ಸರಿ. ಗೀತೆಯ ಕಾವ್ಯ ಸೌಂದರ್ಯಕ್ಕೆ ಮರುಳಾಗುವ ರಸಿಕರಿದ್ದಾರೆ; ಜ್ಞಾನ, ಭಕ್ತಿ, ಕರ್ಮ ಮುಂತಾದ ಮೋಕ್ಷಮಾರ್ಗಗಳಲ್ಲಿ ಒಂದೊಂದಕ್ಕೆ, ಅಥವಾ ಅವುಗಳ ಸಮುಚ್ಚಯಕ್ಕೆ ಪ್ರಾಧಾನ್ಯವೀಯುವ ಆಚಾರ್ಯ ಸಂಪ್ರದಾಯಗಳೂ ಉಂಟು. ಎಷ್ಟೆಷ್ಟೋ ವಿಶಾಲಮತಿಗಳು ಪರೀಕ್ಷಿಸಿದರೂ ಎಲ್ಲರನ್ನೂ ಬೆರಗುಮಾಡುವಂತಹ ಎಲ್ಲರ ಮನಸ್ಸನ್ನೂ ಏಕರೀತಿಯಿಂದ ಸೆಳೆಯುವಂತಹ ಗೀತೆಯು ಅಮೇಯವೇ ಸರಿ. ಭಾರತದ ಮೂಲೆಮೂಲೆಯಲ್ಲಿಯೂ ಹಳ್ಳಿಹಳ್ಳಿಯಲ್ಲಿಯೂ ಇಂದಿಗೂ ಗೀತಾಪ್ರವಚನಗಳು ನಡೆಯುತ್ತವೆ. ಈ ವಿಷಯದಲ್ಲಿ ನೂತನವಾದ ವಿಚಾರ

ವನ್ನು ಹೇಳುವ ಪ್ರಸಕ್ತಿಯೇ ಇಲ್ಲವೆನ್ನಬಹುದು. ಆದರೂ ಇಷ್ಟು ಜನರು ಗೀತೆಯನ್ನು ವಿವರಿಸಿರುವುದರ ಪರಿಣಾಮ ವಾಗಿಯೇ, ಅನೇಕ ಮತಭೇದಗಳೂ ಅನಿವಾರ್ಯವಾಗಿ ಉಂಟಾಗಿವೆ. ಭಾರತೀಯ ತತ್ತ್ವಜ್ಞಾನವನ್ನು ಸ್ವಲ್ಪದ ರಲ್ಲಿಯೇ ಹೃದ್ಗತ ಮಾಡಿಕೊಳ್ಳಬೇಕೆನ್ನುವವರು ಗೀತೆಯ ಮೂಲವನ್ನೇ ಓದಬೇಕು. ಶ್ರೀ ವಿನೋಬಾಜಿಯವರ ಗೀತಾ ಪ್ರವಚನಗಳು ಇಂದಿನ ಜೀವನದ ಉದಾಹರಣೆಗಳನ್ನೂ ಹಿಂದಿನ ಸಾಧುಸಂತರ ಅನುಭವಾಮೃತವನ್ನೂ ಕೂಡಿಸಿ ಕೊಂಡು ಯಾರ ಮನಸ್ಸನ್ನೂ ತಟ್ಟನೆ ಸೆಳೆಯುವಂತೆ ಸುಲಭ ಶೈಲಿಯಲ್ಲಿವೆ. ಗೀತಾಸಾರವನ್ನು ಅವರ ಮಾತುಗಳಲ್ಲಿ ಹೀಗೆ ಸಂಗ್ರಹಿಸಬಹುದು :—

“ ಬೇರೆ ಬೇರೆ ಕಡೆ ಹೊರೆ ಹೊರೆಯಾಗಿ ತತ್ತ್ವಜ್ಞಾನ ಮಹಾ ಭಾರತದಲ್ಲೆಲ್ಲ ಬಂದಿದೆ. ಆದರೆ ಈ ಎಲ್ಲ ತತ್ತ್ವಜ್ಞಾನದ, ಉಪ ದೇಶದ ಸಾರಸರ್ವಸ್ವವನ್ನು ಎಲ್ಲಾದರೂ ವ್ಯಾಸರು ಒತ್ತಟ್ಟಿಗೆ ಇಟ್ಟಿಲ್ಲವೆ ? ಇಟ್ಟಿದಾರೆ. ಸಮಗ್ರ ಭಾರತದ ನವನೀತವನ್ನು ವ್ಯಾಸರು ಭಗವದ್ಗೀತೆಯಲ್ಲಿ ಕೊಟ್ಟಿದಾರೆ. ಬಾಳಿನ ವಿಕಾಸಕ್ಕೆ ಅಗತ್ಯವಾದ ಪ್ರತಿಯೊಂದು ವಿಚಾರವೂ ಬಹುಶಃ ಗೀತೆಯಲ್ಲಿ ಬಂದೇ ಇದೆ :—

ಅರ್ಜುನ ಅಹಿಂಸಾ ವೃತ್ತಿಯವನಲ್ಲ, ಯುದ್ಧ ಪ್ರವೃತ್ತಿ ಯವ. ಯುದ್ಧ ಅವನಿಗೆ ಸ್ವಭಾವ ಪ್ರಾಪ್ತಕಾರ್ಯ, ಅಪರಿ ಹಾರ್ಯ ಕರ್ಮ. ಮೋಹದಿಂದ ಅವನು ತನ್ನ ಕರ್ತವ್ಯ ವನ್ನು ಬಿಟ್ಟುಕೊಡಲು ನೋಡಿದ. ಈ ಮೋಹದ ಮೇಲೆಯೇ ಗೀತೆಯ ಗದಾಘಾತ. ಅಧರ್ಮ, ಪರಧರ್ಮಗಳು ಅಡ್ಡದಾರಿ. ಅವನ್ನು ಬಿಟ್ಟು ಸಾಧಕರು ಸ್ವಧರ್ಮದ ಸಹಜ, ಸರಳ

ಮಾರ್ಗವನ್ನು ಹಿಡಿಯಬೇಕು. ದೇಹ ಕ್ಷಣಭಂಗುರ; ಇದನ್ನು ಸ್ವಧರ್ಮಕ್ಕಾಗಿ ಬಳಸಬೇಕು, ಸ್ವಧರ್ಮಕ್ಕಾಗಿ ಬಿಸುಡಲೂ ಬೇಕು. ಆತ್ಮ ಅಖಂಡ, ವ್ಯಾಪಕ. ಇದನ್ನರಿತು ಮನಸ್ಸಿನಿಂದ ಸ್ವಪರಭೇದವನ್ನು ಕಿತ್ತೊಗೆಯಬೇಕು. ಬಾಳಿನ ತತ್ವವೇ–'ಸಾಂಖ್ಯ' ಅಥವಾ ಶಾಸ್ತ್ರ; ಅನುಷ್ಠಾನವೇ 'ಯೋಗ' ಅಥವಾ ಕಲೆ. ಎರಡೂ ಸೇರಿದರೆ ಜೀವನ ಸೌಂದರ್ಯ ಅರಳುತ್ತದೆ. ಬಾಳುವ ಕಲೆಯೇ ಕರ್ಮಯೋಗ. ಫಲದ ಉದ್ದೇಶವನ್ನು ಬಿಟ್ಟು ಮಾಡುವುದೇ ಕರ್ಮಯೋಗ. ನಿಷ್ಕಾಮ ಕರ್ಮಯೋಗಿಯೇ ಸ್ಥಿತಪ್ರಜ್ಞ, ಜೀವನ್ಮುಕ್ತ ಕರ್ಮಯೋಗದ ಪರಮಫಲ ಬ್ರಹ್ಮನಿರ್ವಾಣ ಅಥವಾ ಮೋಕ್ಷ. ಸಾಮಾನ್ಯ ಮನುಷ್ಯ ಅಪಾರ ಕರ್ಮಮಾಡಿ ಅಲ್ಪ ಫಲಗಳಿಸಿದರೆ ಅದೇ ಕರ್ಮಯೋಗಿ ಸ್ವಲ್ಪ ಕರ್ಮಮಾಡಿ ಅನಂತ ಫಲಗಳಿಸುತ್ತಾನೆ. ಬಾಹ್ಯಕಾರ್ಯ, ಸ್ವಧರ್ಮೋಚಿತ ಕಾರ್ಯ, ಕರ್ಮವಾದರೆ, ಮನಸ್ಸಿನ ನಿಷ್ಕಾಮ ಅನುಸಂಧಾನವೇ ಅದರ ವೈಶಿಷ್ಟ್ಯ ಅಥವಾ 'ವಿಕರ್ಮ'. ಕರ್ಮದಲ್ಲಿ ವಿಕರ್ಮ ಬೆರೆತರೆ 'ಅಕರ್ಮ'ವೆನಿಸುತ್ತದೆ; ಎಂದರೆ ಎಷ್ಟು ಕರ್ಮ ಮಾಡಿದರೂ ಶ್ರಮವೆನಿಸದು. ಕರ್ಮ ಅಕರ್ಮವಾಗುವುದೇ ನಮ್ಮ ಗುರಿಯಾಗಬೇಕು. ನಿಜವಾದ 'ಸಂನ್ಯಾಸವೆಂದರೂ ಇಂತಹ ಅಕರ್ಮವೇ ಸರಿ. ಅದುಮಿ ತುಂಬಿದ ಕರ್ಮವೇ ಹೀಗೆ ಅಕರ್ಮವೆನಿಸುವುದು. ಸೂರ್ಯನಂತೆ ಹಗಲಿರುಳೂ ಕೆಲಸ ಮಾಡಿಯೂ ಕೆಲಸ ಮಾಡದಿರುವುದೇ ಅಕರ್ಮ. ಸಂನ್ಯಾಸಿ, ಯೋಗಿ—ಇಬ್ಬರೂ ಲೋಕ ಸಂಗ್ರಹ ಮಾಡುತ್ತಾರೆ. ಹೊರಗೆ ಕರ್ಮತ್ಯಾಗದಂತೆ ಕಂಡರೆ ಕೆಲವು ಸಲ ಆ ತ್ಯಾಗದಲ್ಲಿಯೇ ಕರ್ಮ ತುಂಬಿರುತ್ತದೆ. ಜ್ಞಾನಿ—ಸಂನ್ಯಾಸಿ, ಜ್ಞಾನಿ—

ಕರ್ಮಯೋಗಿ ಇಬ್ಬರೂ ಒಂದೇ ಸಿಂಹಾಸನದಲ್ಲಿ ಕೂಡು ವವರು. ಒಂದೇ ತತ್ವದ ಎರಡು ಮುಖ. ಅತಿವೇಗವಾಗಿ ತಿರುಗುವಾಗ ಯಂತ್ರ ಸ್ಥಿರವಾಗಿ ಕಾಣುತ್ತದೆ. ಸಂನ್ಯಾಸಿಯೂ ಹೀಗೆಯೇ. ಅವನ ಶಾಂತಿ ಸ್ಥಿರತೆಗಳಿಂದ ಅನಂತ ಪ್ರೇರಣೆ ಹೊರಹೊಮ್ಮುತ್ತದೆ. ಆದರೂ ಸಂನ್ಯಾಸಕ್ಕಿಂತ ಕರ್ಮ ಯೋಗ ಶ್ರೇಷ್ಠ ಎಂದಿದ್ದಾನೆ ಭಗವಂತ. ಇದು ಸಿದ್ಧಿಯ ದೃಷ್ಟಿಯಿಂದ ಹೇಳಿದ ಮಾತಲ್ಲ; ಸಾಧಕನ ದೃಷ್ಟಿಯಿಂದ ಹೇಳಿದುದು. ಪೂರ್ಣ ಸಂನ್ಯಾಸ ಸಿದ್ಧನ ಸ್ಥಿತಿ; ಪೂರ್ಣ ಕರ್ಮಯೋಗ ಸಾಧಕನಿಗೂ ಸಾಧ್ಯ. ದೇಹಿಗೆ ಸುಲಭತೆ ಯಲ್ಲಿ ನಿರ್ಗುಣಕ್ಕಿಂತ ಸಗುಣವೇ ಶ್ರೇಷ್ಠ. ಜ್ಞಾನ+ಕರ್ಮ= ಜ್ಞಾನ+ಕರ್ಮಾಭಾವ ಎಂಬ ಸಮೀಕರಣ ನಿಜ. ಆದರೆ ಜ್ಞಾನವನ್ನು ಎರಡೂ ಕಡೆ ತೆಗೆದುಬಿಟ್ಟರೆ ಕರ್ಮಾಭಾವಕ್ಕಿಂತ ಕರ್ಮವೇ ಶ್ರೇಷ್ಠ. ಮಾನಸಿಕಸಾಧನೆ (= ವಿಕರ್ಮ) ಯ ಅಥವಾ ಧ್ಯಾನಯೋಗದ ಮುಖ್ಯ ಅಂಶಗಳು—ಚಿತ್ತದ ಏಕಾಗ್ರತೆ, ಜೀವನದಲ್ಲಿ ಪರಿಮಿತತನ, ಮತ್ತು ಸಮದೃಷ್ಟಿ ಅಥವಾ ಶುಭದೃಷ್ಟಿ. ಎಂದೂ ಈ ದಾರಿಯಲ್ಲಿ ಕಾಲಿಟ್ಟವನ ಶ್ರಮ ವ್ಯರ್ಥವಾಗುವುದಿಲ್ಲ. (ಇದು ಗೀತೆಯ ಪ್ರಥಮ ಷಟ್ಕ.)

ಮುಂದಿನ ಷಟ್ಕದಲ್ಲಿ ಜಡಪ್ರಕೃತಿ (ಅಪರಾ), ಚೈತನ್ಯ ಮಯ ಆತ್ಮ (ಪರಾ) ಎರಡರ ಬೆರಕೆಯಿಂದ ವಿಶ್ವಸೃಷ್ಟಿಯಾದ ವಿಷಯ ಬರುತ್ತದೆ. ಭಕ್ತಿಯ ಭವ್ಯವಾದ ಬಾಗಿಲನ್ನಿಲ್ಲಿ ತೆರೆದಿದೆ. ಅದೇ ಚಿತ್ತಶುದ್ಧಿಗೆ ಸಾರ್ವಭೌಮ ಉಪಾಯ. ಭಕ್ತಿಯಲ್ಲೂ ಮೂರು ವಿಧ. ೧. ಸಕಾಮ, ೨. ನಿಷ್ಕಾಮ, ೩. ಜ್ಞಾನಪೂರ್ಣ. ಸಕಾಮ ಭಕ್ತರು ಮತ್ತೆ ಮೂರು ವಿಧ, ೧. ಆರ್ತ, ೨. ಜಿಜ್ಞಾಸು, ೩. ಅರ್ಥಾರ್ಥಿ. ಆದರೆ

ಅಜ್ಞಾನಿಗಿಂತ ಸಕಾಮಭಕ್ತನೂ ಮೇಲ್ಮಟ್ಟದವನು. ಮರಣ ಕಾಲದಲ್ಲಿ ಸ್ಪಷ್ಟವಾಗಿ ಉಳಿಯುವ ವಿಚಾರವೇ ಮುಂದಿನ ಜನ್ಮದಲ್ಲಿ ಬಲವತ್ತರವಾಗಿರುವುದು. ಅದು ಶುಭ್ರವಾಗಿಯೇ ಉಳಿಯುವಂತೆ ಬಾಳನ್ನು ತಿದ್ದಬೇಕು. ಸತತವೂ ಶ್ರಮಿಸ ಬೇಕು. ಕ್ಷಣ ಕ್ಷಣಕ್ಕೂ ನಡೆಯುವ ಕರ್ಮಗಳನ್ನೆಲ್ಲ ಈಶ್ವ ರಾರ್ಪಣ ಮಾಡುವುದೇ 'ರಾಜಯೋಗ'. ಸ್ಥೂಲ, ಸೂಕ್ಷ್ಮ ವಸ್ತುಗಳಲ್ಲೆಲ್ಲ ಭಗವಂತನ ವಿಭೂತಿಯನ್ನು ಕಾಣುವ ಶಕ್ತಿ ಯನ್ನು ಹೆಚ್ಚಿಸಿಕೊಳ್ಳಬೇಕು. ಭೂತಭವಿಷ್ಯದ್ ವರ್ತಮಾನ ಗಳ ಅನಂತತೆಯ ಏಕಾಕಾರವನ್ನು ಸಮಗ್ರದೃಷ್ಟಿಯಿಂದ ನೋಡುವುದೇ ವಿಶ್ವರೂಪದರ್ಶನ. ಸ್ವಧರ್ಮದಲ್ಲೂ ಎರಡು ವಿಭಾಗವುಂಟು—ಒಂದು ಬದಲಾಗುವ ವಿಭಾಗ, ಇನ್ನೊಂದು ಬದಲಾಗದುದು. ಒಂದು ಆಶ್ರಮ ಧರ್ಮ, ಇನ್ನೊಂದು ವರ್ಣಧರ್ಮ. ಸ್ವಧರ್ಮದಲ್ಲಿ ಸ್ವದೇಶ ಧರ್ಮ, ಸ್ವಜಾತಿ ಧರ್ಮ, ಸ್ವಕಾಲೀನ ಧರ್ಮಗಳೆಲ್ಲವೂ ಬರುತ್ತವೆ. ಈ ಕಲ್ಪನೆ ಯನ್ನೆಲ್ಲ ಮತ್ತೆ ಸಂಗ್ರಹಿಸುವುದಾದರೆ—

೧. ರಾಜಸ ತಾಮಸ ಕರ್ಮಗಳನ್ನು ತೊರೆಯಬೇಕು.

೨. ಆ ತ್ಯಾಗದ ಫಲವನ್ನೂ ತ್ಯಾಗಮಾಡಬೇಕು.

೩. ಸಾತ್ವಿಕ ಕರ್ಮವನ್ನು ಸ್ವರೂಪತಃ ತ್ಯಾಗಮಾಡದೆ ಫಲತಃ ತ್ಯಾಗಮಾಡಬೇಕು.

೪. ಫಲತ್ಯಾಗ ಪೂರ್ವಕ ಮಾಡುವ ಸಾತ್ವಿಕ ಕರ್ಮವನ್ನು ಅದು ಸದೋಷವಾಗಿದ್ದರೂ ಮಾಡಬೇಕು.

೫. ಇಂತಹ ಸಾತ್ವಿಕಕರ್ಮದಿಂದ ಚಿತ್ತಶುದ್ಧಿಯಾದೀತು.

೬. ಕ್ರಿಯೆ ಜಾರೀತು—ಆದರೂ ಲೋಕಸಂಗ್ರಹ ಕರ್ಮ— ನಡೆದೇ ಇದ್ದೀತು.

೭. ಓಘಪ್ರಾಪ್ತವಾದ ಸಾತ್ವಿಕಕರ್ಮವನ್ನೇ ಮಾಡಬೇಕು
ಸಹಜಪ್ರಾಪ್ತವಲ್ಲವುದು ಎಷ್ಟೇ ಸೊಗಸಾದರೂ ಅದನ್ನು
ದೂರ ಇಡಬೇಕು.'

೮. ಸಹಜಪ್ರಾಪ್ತ ಸ್ವಧರ್ಮದಲ್ಲೂ ಎರಡು ಬಗೆ: ಬದಲ
ವುದು ಮತ್ತು ಬದಲಾಗದುದು. ಬದಲುವ ಸ್ವಧರ್ಮ ಬ
ಲಾಗುತ್ತಲೇ ಇರಬೇಕು.

೯. ಸಾಧಕನ ಸಾಧನೆಯ ಪರಾಕಾಷ್ಠೆ ಮೋಕ್ಷ. ಕರ್ಮ
ಮಾಡಿಯೂ ಅವನು ಮಾಡ; ನಾನು ಮಾಡುತ್ತೇನೆಂ
ಕಲ್ಪನೆಯೇ ಅವನಿಗಿರುವುದಿಲ್ಲ. ಇದು ಅತಿನೈತಿಕತೆಯೆನ್ನ
ಬಹುದು."

ಭಗವದ್ಗೀತೆಯ ತಾತ್ಪರ್ಯನಿರೂಪಣೆಯನ್ನು ಇದಕ್ಕಿಂತ ಸರ
ವಾಗಿ, ಪಾರಿಭಾಷಿಕ ಶಬ್ದಜಾಲವನ್ನು ಬಳಸದೆ ತಿಳಿಸುವುದ
ಸುಕರವೆಂದು ತೋರುವುದಿಲ್ಲ. ಕುತೂಹಲಿಗಳು ವಿನೋಬಾ
ಯವರ ಗೀತಾಪ್ರವಚನವನ್ನು ಪೂರ್ಣವಾಗಿ ಓದಿದರೆ ಇಂದಿನ
ಪ್ರತಿಯೊಬ್ಬನ ಬಾಳಿಗೂ ಭಗವದ್ಗೀತೆಯು ಹೇಗೆ ಕೈದೀವಿ
ಯಾಗಬಹುದೆಂಬುದು ಸ್ಪಷ್ಟವಾಗುತ್ತದೆ. ಇಂತಹ ಮಹಾಭಾ
ತದ ಕರ್ತೃವನ್ನು ಬ್ರಹ್ಮ-ವಿಷ್ಣು-ಮಹೇಶ್ವರರೆಲ್ಲರ ಸಾಕಾ
ಸ್ವರೂಪವೆಂದು ಕವಿಗಳು ವರ್ಣಿಸಿದರೆ ಸೋಜಿಗವೇನು?

ಅಚತುರ್ವದನೋ ಬ್ರಹ್ಮಾ
ದ್ವಿಬಾಹುರಪರೋ ಹರಿಃ |
ಅಫಾಲಲೋಚನಃ ಶಂಭುಃ
ಭಗವಾನ್ ಬಾದರಾಯಣಃ ||

'ವ್ಯಾಸಮಹರ್ಷಿಯು ನಾಲ್ಕು ಮೊಗಗಳಿಲ್ಲದ ಬ್ರಹ್ಮ;
ಎರಡೇ ತೋಳಿನ ವಿಷ್ಣು; ಹಣೆಗಣ್ಣಿಲ್ಲದ ಪರಮೇಶ್ವರ.'

ಸಮಾಪ್ತ

## ಉಪಯುಕ್ತ ಕನ್ನಡ ಗ್ರಂಥಗಳು

೧. ವಚನಭಾರತ

—ಪ್ರೊ॥ ಎ. ಆರ್. ಕೃಷ್ಣಶಾಸ್ತ್ರಿ

೨. ಭಾರತ ತೀರ್ಥ

—ಶ್ರೀ ಮಾಸ್ತಿ ವೆಂಕಟೇಶ ಅಯ್ಯಂಗಾರ್

೩. ಕವಿಕಾವ್ಯದೃಷ್ಟಿ (ಭಾರತಗಳ ಶ್ರೀಕೃಷ್ಣ)

—ಪ್ರೊ॥ ವಿ. ಸೀತಾರಾಮಯ್ಯ

೪. ತಪೋನಂದನ

—ಕು.ವೆಂ.ಪು.

೫. ಗೀತಾಪ್ರವಚನ

—ಆಚಾರ್ಯ ವಿನೋಬಾ

(ಅನುವಾದಕರು : ಸಿದ್ದವನಹಳ್ಳಿ ಕೃಷ್ಣಶರ್ಮ)

೬. ಗೀತಾಗಾಂಭೀರ್ಯ

—ಶ್ರೀರಂಗ

೭. ಸಂಸ್ಕೃತ ಕಾವ್ಯ

—ಡಾ॥ ಕೆ. ಕೃಷ್ಣಮೂರ್ತಿ

AKSHARA GRANTHALAYA

ACC.NO. 111436

WO 2—MUPM—3,000—6-11-1958.

